# ಸಪ್ತಪದಿ

ಏಕಾಂಕ ನಾಟಕಗಳ ಸಂಗ್ರಹ





ಸಿಂಪಿ ಲಿಂಗಣ್ಣ







ಶ್ರೀಅರವಿಂದ ಗ್ರಂಥಾಲಯ, ಚಡಚಣ

# ಸಪ್ತಪದಿ

ಏಕಾಂಕ ನಾಟಕಗಳ ಸಂಗ್ರಹ

ಸಿಂಪಿ ಲಿಂಗಣ್ಣ

ಶ್ರೀಅರವಿಂದ ಗ್ರಂಥಾಲಯ, ಚಡಚಣ

# ಅರಿಕೆ

ಈ ಸಂಕಲನದಲ್ಲಿರುವ 'ಏಕಾಂಕ ನಾಟಕಗಳು' ತಂತ್ರಬದ್ಧವಾಗಿಯೇ ಇರುವವೆಂದು ನಾನೇನು ಹೇಳುವದಿಲ್ಲ ಆದರೂ ಶಾಲೆಯ ಮಕ್ಕಳು ಇವುಗಳನ್ನು ಆಡಿ ಸಂತೋಷಪಟ್ಟಿದ್ದಾರೆ ಜನರು ನೋಡಿ ಸಂತೋಷ ಪಟ್ಟಿದ್ದಾರೆ ಇತ್ತೀಚಿಗ ಪಠ್ಯೇತರ ಚಟುವಟಿಕೆಗಳಲ್ಲಿ ನಾಟಕಾಭಿನಯವು ಪ್ರತಿಯೊಂದು ಶಾಲೆಗೂ ಅನಿವಾರ್ಯವಾದಂತಾಗಿದೆ ಅನಿವಾರ್ಯವಾದ ಆ ನಾಟಕಾಭಿನಯಕ್ಕೆ ಬಾಲಕರಿಗೂ ಪ್ರೇಕ್ಷಕರಿಗೂ ಸುಲಭವಾಗಿ ನಿರ್ದಿಷ್ಟ ಉದ್ದೇಶವನ್ನು ಸಾಧಿಸಿಕೊಡುವುದಕ್ಕ ಇಲ್ಲಿಯ 'ಏಕಾಂಕ ನಾಟಕಗಳು' ಸಾಕಷ್ಟು ಸಮರ್ಥವಾಗಿವೆಯೆಂದು ನನಗೆ ಕಂಡುಬಂದಿದೆ ಆ ಭರವಸೆ ಯಿಂದಲೇ ಈ ಹೊತ್ತು ಅವುಗಳನ್ನೆಲ್ಲ ಒತ್ತಟ್ಟಿಗೆ ತಂದು ಪ್ರಕಟಗೊಳಿಸುವ ಸಾಹಸ ಮಾಡಲಾಗಿದೆ

'ಒಕ್ಕಲುಮಗ', 'ಯಾರೂ ಇಲ್ಲ', 'ಸಾಲ್ಯಾಗಿನ ವಿದ್ಯಾ' 'ಬಂದೆಪ್ಪಾ ಮಳೆರಾಜ' ಇವು ಹಳ್ಳಿಗರ ಮುಖಕ್ಕೆ ಹಿಡಿದ ಕನ್ನಡಿಯಂತಿವೆ 'ಮೊದಲನೇ ದೇಶದ್ರೋಹಿ', 'ಕಾಯಕದ ಕಾಣಿ', 'ಬುದ್ಧದೇವ' ಇವು ಹಳ್ಳಿಗರ ಮುಗಿಲಲ್ಲಿ ತೇಲುವ ಪ್ರತಿಸೃಷ್ಟಿಯಂತಿವೆ ಕೆಲವು ಜೀವನ ಪ್ರತಿಬಿಂಬಗಳಾಗಿದ್ದರೆ, ಇನ್ನು ಕೆಲವು ಜೀವನಕ್ಕ ಪ್ರತಿಭೆಗಳಾಗಿವೆ ಇವೆಲ್ಲವೂ ಒಂದಿಲ್ಲೊಂದು ಬಗೆಯಿಂದ ಪ್ರೇಕ್ಷಕರ ಕಣ್ಣಮುಂದೆ ಇಲ್ಲವೆ ಓದುಗರ ಬಗೆಯ ಮುಂದೆ ಸುಳಿದು ಹೋಗಿವೆ 'ಒಕ್ಕಲುಮಗ' 'ಬುದ್ಧದೇವ' ಇವು ಪುರಾತನ ದೇಹವನ್ನು ಬಿಟ್ಟುಕೊಟ್ಟು ನವದೇಹವನ್ನು ಧಾರಣ ಮಾಡಿ ಬಂದಿವೆ ಇವಾವವೂ ಅನ್ನ, ರೊಟ್ಟಿ, ಹೋಳಿಗೆಗಳಂತೆ ಇದೇ ಈಗ ಸಿದ್ಧಪಡಿಸಿದ ತಾಜಾ ಅಡಿಗೆಯಂತೇನೂ ಅಲ್ಲ ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ನೆಲ್ಲೀಪಾಕ, ಗುಳಂಬಗಳಂತೆ ಮುರಿದು ತಿನ್ನುವ, ನೆಕ್ಕಿ ಸವಿಯುವ ತಿನಿಸುಗಳು ಅವು ಪಥ್ಯಕರವಾಗಿವೆಯೆಂಬ ವಿಶ್ವಾಸದಿಂದ ನಾಡಿನ ಮಕ್ಕಳ ಕೈಗೆ ಇರಿಸುತ್ತಿದ್ದೇನೆ ಅವುಗಳಿಂದ ನಾಲಗೆ ನೀರೊಡೆದು ಹಸಿವೆ ಕಾಣಿಸಿಕೊಂಡರೆ ನಮ್ಮ ಶ್ರಮವು ಸಾರ್ಥಕವಾದಂತೆ

ನನ್ನ ತರುಣಮಿತ್ರರಾದ ಶ್ರೀ ಮಲ್ಲಿಕಾರ್ಜುನ ಹೊನ್ನುಂಗರ ಇವರು ದುಂಬಾಲಬಿದ್ದು ಇದನ್ನು ಪ್ರಕಟಿಸುವದಕ್ಕೆ ಎತ್ತುಗಡೆಯ ಪ್ರಯೋಗವನ್ನು ಕೈಕೊಂಡಿರದಿದ್ದರೆ, ಈ ಸಂಕಲನವು ಕಾಣಿಸಿಕೊಳ್ಳುವುದಕ್ಕೆ ಇನ್ನೆಷ್ಟು ದಿವಸಗಳು ಬೇಕಾಗುತ್ತಿದ್ದವೋ ತಿಳಿಯದು ಅಂದವಾಗಿ, ಹೊತ್ತಿಗೆ ಸರಿಯಾಗಿ ಮುದ್ರಿಸಿಕೊಟ್ಟು ಉಪಕರಿಸಿದ ಸಾಧನ ಮುದ್ರಣಾಲಯದ ಒಡೆಯರಾದ ಶ್ರೀ ಕುಲಕರ್ಣಿ ಶೇಷಗಿರಿರಾಯರಿಗೆ ನಾನು ಧನ್ಯವಾದಗಳನ್ನು ಅರ್ಪಿಸುತ್ತೇನೆ

ಶ್ರೀ ಅರವಿಂದ ಗ್ರಂಥಾಲಯ
ಚಡಚಣ
೨-೩-೫೪

ಸಿಂಪಿ ಲಿಂಗಣ್ಣ

# ಪರಿವಿಡಿ


| | | |
|---|---|---|
| ೧ | ಒಕ್ಕಲುಮಗ | ೧- ೨೬ |
| ೨ | ಕಾಯಕದ ಕಾಣಿ | ೨೭- ೪೩ |
| ೩ | ಮೊದಲನೇ ದೇಶದ್ರೋಹಿ | ೪೪- ೫೭ |
| ೪ | ಯಾರೂ ಇಲ್ಲ | ೫೮- ೬೮ |
| ೫ | ಬುದ್ಧದೇವ | ೬೯- ೯೭ |
| ೬ | ಬಂದೆಪ್ಪಾ ಮಳೆರಾಜ | ೯೮-೧೦೪ |
| ೭ | ಸಾಲ್ಯಾಗಿನ ವಿದ್ಯಾ | ೧೦೫-೧೧೨ |

# ಒಕ್ಕಲುಮಗ

## (ಒಂದು ಹಳ್ಳಿಯ ದೃಶ್ಯ)



### ೧ನೇ ಪ್ರವೇಶ.

[ ದೇಸಾಯಿ ರಂಗರಾಯರ ವಿಶ್ರಾಂತಿ ಮಂದಿರ ರಂಗರಾಯರು "ಬ್ರಿಜಕೇ ಗೌಲನ ಬನಸೇ ಆಯ" ಎಂಬ ಪದವನ್ನು ಕೆಳದನಿಯಲ್ಲಿ ಹಾಡುತ್ತ ಕುರ್ಚಿಯ ಮೇಲೆ ಲಹರಿಯಲ್ಲಿ ಕುಳಿತಿದ್ದಾರೆ ]

ಕಾವೇರಿ – (ಪ್ರವೇಶಿಸಿ) ಏನ್ರೀ, ಆ ಪೇಪರು ಎಲ್ಲಿದೆ?

ರಂಗರಾಯ – (ನೋಡಿ) ಯಾವಾಗ ಬಂದರು ದೇವಿಯವರು! ನನ್ನ ಹಾಡುಗೀಡು ಕೇಳಿದಿರೇನು ಮತ್ತೆ?

ಕಾವೇರಿ – ಛೆ! ಕೇಳಿಲ್ಲ ಬಿಡಿರಿ ನಾನು ಬಂದ ಮೇಲೆ ನೀವು ಬರಿ ಪಲ್ಲವಿಯನ್ನಷ್ಟೇ ಹಾಡಿ ಮುಗಿಸಿಬಿಟ್ಟಿರಿ

ರಂಗರಾಯ – ಅಷ್ಟಾದರೂ ಕೇಳಿದಿಯಲ್ಲ? ನಿನ್ನಂತೆ ನನ್ನ ದನಿಯಿಲ್ಲ, ಹೇಗೆನಿಸಿತು?

ಕಾವೇರಿ - ಬಹಳ ಸೊಗಸೆನಿತು ಆದರೆ

ರಂಗರಾಯ – "ಆದರೆ"—ಎಂದೆನ್ನುವಿಯೇ? ನೀನು ರಸಿಕಳೆಂದು ತಿಳಿದಿದ್ದೆನಲ್ಲ!

ಕಾವೇರಿ – ಹಾಗಾದರೆ ಈಗ ರಸಿಕಳಲ್ಲವೆಂದೇ ನಿರ್ಣಯಿಸಿಬಿಟ್ಟಿರೇನು?

ರಂಗರಾಯ – ನೋಡು ನೀನು ರಸಿಕಳಿದ್ದರೆ, ಮನೆಯೊಳಗಿನ ರಾಗಾವಳಿಯ ಸೀರೆಯನ್ನು ಬಿಟ್ಟು, ಈ ಚಂದ್ರಕಾಳಿಯ ಸೀರೆಯನ್ನೇಕೆ ಉಡುತ್ತಿದ್ದೆ? ಬಿಳೇ ಹೂವಿನ ಕೆಂಪು ರೇಸಿಮೆಯ ಪೋಲ್ಕಾ ಇದ್ದರೂ ಈ ಗಿಣಿ ಬಣ್ಣದ ಕುಬಸವನ್ನು ತೊಟ್ಟ ನಿನಗೆ ರಸಿಕಳೆಂದು ಹೇಗನ್ನಲಿ? ಎರಡೂ ಹೊತ್ತು, ದುಂಡಮಲ್ಲಿಗೆಯ ಹೂಗಳು ನಿನ್ನ ತನಕ ದಂಡನಮಸ್ಕಾರ

ಹಾಕುತ್ತ ಬರುತ್ತಿರಲು, ಒಣವೆರಡು ಮುಳಜಾಜಿಯ ಹೂಗಳನ್ನು ತುರುಬಿನಲ್ಲಿ ಸಿಕ್ಕಿಸಿಕೊಂಡ ನೀನು ರಸಿಕಳೇ?

**ಕಾವೇರಿ** – ಎಂಥ ರಸಿಕತೆಯಿದ್ದರೂ ಏನು ಉಪಯೋಗ? ಇಂಥಾ ಹಳ್ಳಿಯಲ್ಲಿ ರಸಿಕರಿದ್ದರೂ ಇಲ್ಲದಂತೆಯೇ ನಮ್ಮಂಥ ಸುಶಿಕ್ಷಿತ ದಂಪತಿಗಳಿಗೆ ನಗರಗಳೇ ಪಾಡು ಒಬ್ಬರ ಆಳಾಗಿ ನೌಕರಿ ಮಾಡಲಾರೆವೆನ್ನುತ್ತೀರಿ ಆದರೆ ನಗರದಲ್ಲಿ ಹೋಗಿದ್ದರೆ, ನಿಮಗೆ ರಸಿಕ ಗೆಳೆಯರು ಸಿಗುವರು, ನನ್ನ ಜೊತೆಗೆ ಸುಶಿಕ್ಷಿತ ಹೆಣ್ಮಕ್ಕಳೂ ಸಿಗುವರು ಆಮೇಲೆ ಪೋಷಾಕು ಮಾಡಲಿ, ಹೂ ಮುಡಕೊಳ್ಳಲಿ ಚಂದ! ಒಬ್ಬರ ನೋಡಿ ಒಬ್ಬರು ಮಾಡಲಿಕ್ಕೆ ಬರುತ್ತದೆ ಆದರೆ ಇಲ್ಲಿದ್ದರೆ, ಅಡವೀ ಹೆಂಗಸಿನಂತೇ ಆಗೋದು!

**ರಂಗರಾಯ** – ಎರಡೂ ವೈಯಿಂದ ವಿಚಾರಿಸು ಅಂದರೆ ನಾನು ನಗರಕ್ಕೆ ಬೇಡವೆನ್ನುವ ಕಾರಣವು ಕಂಡುಬರುವದು

**ಕಾವೇರಿ** – ನೀವನ್ನುವದು ತಿಳಿಯಿತು ಹೊಲಮನೆಗಳ ವ್ಯವಸ್ಥೆಯು ತಪ್ಪುವದೆಂದು ಅನ್ನುತ್ತೀರಲ್ಲವೆ? ಇಲ್ಲಿದ್ದು ಮುಂದಿಗೆ ಹೊಲ ಕೊಡುವದಕ್ಕೂ, ಪಟ್ಟಣದಲ್ಲಿದ್ದು ಮುಂದಿಗೆ ಲಾವಣಿಯಿಂದ ಹೊಲ ಕೊಡುವದಕ್ಕೂ ಭೇದವೇನಿದೆಯೋ ನನಗೇನೂ ತಿಳಿಯದು ಇಲ್ಲಿದ್ದರೇನು ನೀವು ಸ್ವತಃ ಒಕ್ಕಲತನವನ್ನು ಮಾಡಬಲ್ಲಿರಾ?

**ರಂಗರಾಯ** – ಅದಂತೂ ಇಲ್ಲವೇ ಇಲ್ಲ ಆದರೆ ಇಲ್ಲಿ ಖರ್ಚು ಕಡಿಮೆ ಉತ್ಪನ್ನ ಸ್ವಲ್ಪವೇ ಬಂದರೂ ಕೂಡ ಇಲ್ಲಿ ಸಾಗುತ್ತದೆ. ಆದ್ದರಿಂದ ನಗರದಲ್ಲಿ ಮನೆ ಮಾಡಿಕೊಂಡಿರುವ ಹಟವನ್ನು ಬಿಡು

**ಕಾವೇರಿ** – ಹೇಗೆ ಬಿಡಬೇಕು? ನಿಮಗೆ ಇಲ್ಲಿ ಹೊತ್ತುಗಳೆಯುವದಕ್ಕೆ ಅಂಥವರು ಇಂಥವರು ಬಂದು ಜತೆಯಾಗುತ್ತಾರೆ ನಿಮಗದರಿಂದ ಮನಸ್ಸು ರಮಿಸುತ್ತದೆ ನನಗೆ ಏನಿದೆ?

**ರಂಗರಾಯ** – ನಿನಗೆ ಏನು ಬೇಕೇ ಇನ್ನೂ? ನಾನೇ ನಿನ್ನ ಸರ್ವಸ್ವವೆಂದು ಮೊನ್ನೆ ನೀನೇ ಹೇಳಿಲ್ಲವೇ? ಶ್ರೀರಂಗಪಟ್ಟಣದ ರಂಗನಾಥ ದೇವನನ್ನು ಕಾವೇರಿ ನದಿಯು ನಲಿನಲಿದು ಮೋದಪಡಿಸುವಂತೆ, ಈ ರಂಗರಾಯನಿಗೆ ಕಾವೇರಿಯಾದ ನೀನು ನಲಿದರೇ ಮೋದವಲ್ಲವೇ?

**ಕಾವೇರಿ** – ಅಯ್ತಲ್ಲಾ ! ಯಾವಾಗಲೂ ನಿಮ್ಮದೇ ಮೇಲು (ಮುಗುಳುನಗೆ)

**ರಂಗರಾಯ** – ಕನ್ನಡಿಯ ಮೇಲಿನ ಧೂಳು ಜಾಡಿಸಿದರೆ, ಮತ್ತದು ಕುಲು-ಕುಲು ನಗಲೇಬೇಕು !

**ಕಾವೇರಿ** – (ನಗುತ್ತ) ನೀವೇನಾದರೂ ಅಂದುಕೊಳ್ಳಿರಿ ಅಗೋ, ನಿಮ್ಮ ಹಳ್ಳಿಗಾಡಿನ ಹುಂಬ ಗೆಳೆಯರು ಬಂದರು ನಾನು ಹೋಗುತ್ತೇನೆ ಚಹಾಗಿಹಾ ಮಾಡು ಅಂದೀರಿ ಅವರೊಳಗೇ ಒಂದು ಆಸಾಮಿಗೆ ಕೆಲಸ ಹಚ್ಚಿರಿ

**ರಂಗರಾಯ** – ಏನು ಮಾರೂತೀ, ಏನು ಬಾಳಾರಾಮ, ಬರಲಿಕ್ಕೆ ತಡವಾಯ್ತು, ಅಲ್ಲದೆ ಕರೆಯಲಿಕ್ಕೆ ಕಳಿಸಿದ ಮೇಲೆ ಬರೋಣವಾಯ್ತು ?

(ಮಾರುತಿಯೂ ಬಾಳಾರಾಮನೂ ಬರುವರು)

**ಮಾರುತಿ** – ನಮಗ ಕರೆಯಲಿಕ್ಕ ಕಳಿಸುವ ಕಾರಣವಿಲ್ಲ ಬಿಡ್ರಿ ನಮ್ಮ ಮನೆ ಇದ್ದಂತೇ ಅದೆ

**ರಂಗರಾಯ** – ಕೆಲಸವಿತ್ತೇನು ?

**ಬಾಳಾರಾಮ** – ಕೆಲಸವಿಲ್ಲ ಬೊಗಸೆಯಿಲ್ಲ ಕೆಲಸ ಮಾಡಲಿಕ್ಕೆ ನಾವೇನು ಆ ದೊಡ್ಡ ಮನೆ ಶಂಕರಪ್ಪ ಏನು?

**ರಂಗರಾಯ** – (ನಕ್ಕು) ತಾ ಕಲಿತವನಾಗಿ, ಸ್ವತಃ ಗುದ್ದಲಿಹಿಡಿದು ಒಕ್ಕಲತನ ಮಾಡೋದೆಂದರೆ ಕಲಿಕೆಟ್ಟ ಮಾತಾಯ್ತು

**ಮಾರುತಿ** – ರುಮ್ಮಹಿಡಿಯೋದೇ ಗಟ್ಟಿಯಿದ್ದರೆ, ಸಾಲೆಯೇಕೆ ಕಲಿಯ ಬೇಕು ಬೆಂಕಿ ಹಚ್ಚಲಿಕ್ಕೆ ! ನೌಕರಿ ಸಿಗದಿದ್ದರೆ ಕುಳಿತು ಉಣ್ಣಬೇಕು ಹೊರತು, ದನ ದುಡಿದಂತೆ ಹೊಲದಲ್ಲಿ ತೇಕಾಡಲಿಕ್ಕೆ ಅವನಿಗೇನು ಕಡಿಮೆ ಬಿದ್ದಿತ್ತು ?

**ಬಾಳಾರಾಮ** – ತಾ ಸಾಯೂದಲ್ಲದೆ ಪಾಪ ಹೂವಿನಂಥ ಹೆಂಗಸು ಗಂಗವ್ವನಿಗೂ ಮೈತುಂಬಾ ಕೆಲಸ ಚಲೋಹೆಣ್ಮಗಳೆಂದು ಬಾಳ್ವೆ ಸಾಗಿದೆ ಆ ಹೆಂಗಸು ಬಳಿಗ್ಗಾರ ನಾಗವ್ವನಂತೆ ಗಂಡನ ನೆತ್ತೀಬಡಿದು ಹತ್ತೀ ಹೊಲದಲ್ಲಿ ಕುಳ್ಳಿರಿಸಿ ಹಾರಿಹೋಗುವವಳಿದ್ದರೆ ಈ ಶಂಕರೆಪ್ಪನದು ತಿಳಿಯುತ್ತಿತ್ತು !

**ರಂಗರಾಯ** – (ನಗುತ್ತ) ಹೌದು ಹೌದು ! ಖರೇ ಮಾತು ನೋಡು

**ಬೀರ್ಯಾ** – (ಬಂದು) ಧನ್ಯಾರ, ದೊಡ್ಡ ಮನೀ ಶಂಕರೆಪ್ಪ ಜೆಂವೀಗಿ ನೀರು ಉಣಿಸಲಿಖ್ಹತ್ಯಾನರೀ

ರಂಗರಾಯ – ಬಾ ಎಂದು ಹೇಳಿದೆಯಾ ?

ಬೀರ್ಯಾ –ಇಲ್ರೀ, 'ಶಂಕ್ರಪ್ಪ ಯಾನ ಮಾಡ್ತಾನ ನೋಡೋ' ಅಂದಿದ್ರಿ ನೀವು ನಾ ಭಿರ್ರನೇ ಅವ್ನ ಮನೀಗಿ ಹೋದ, ಅಂವಾ ಮನ್ಯಾಗ ಇದ್ದಿಲ್ಲ, ಹಾಂಗೇ ಸಪಾಟೇ ತೋಟಕ್ಕ ಒತ್ತದ ಹೋಗಿ ನೋಡುತಾನಾ

ರಂಗರಾಯ – ಸಾಕು ಬಿಡು, ತಿಳಿಯಿತು, ಮಳ್ಳಮಗನೇ ಹೋಗಿ ಕರಕೊಂಡ ಬಾ ಅವನನ್ನು

ಬೀರ್ಯಾ – ಹಿಂಗ್ಯ ಮಾಡಲ್ರೀ ಅಂಗಾರ ಒಳ್ಳೇದು (ಹೋಗುತ್ತಾನೆ)

ಮಾರುತಿ – ಮಂದಿಯೆಲ್ಲ "ಮಳ್ಳ ಮಳ್ಳ" ಎಂದಂತೆ ಬೀರ್ಯಾ ಖರೇನೇ ಮಳ್ಳನೇ ಆಗಿಬಿಟ್ಟಿದ್ದಾನೆ ಬುದ್ಧಿ ಬಲು ಬುದ್ಧಿ, ಖರಡಾ ತೀಡೂ ಲೆಕ್ಕಣಿಕೀ ತುದೀ ಆಗೇದ

ನಿರ್ವಾಣಿ – (ಬಾಯಲ್ಲಿ ಬೀಡಿ ಹಿಡಿದುಕೊಂಡು ಝುಗ್ಗು ಹಾಕುತ್ತ ಬರುತ್ತಾನೆ)

ಬಾಳಾರಾಮ – ಪ್ರೋಕ್ತರಂತೆ ಝುಗ್ಗು ಹಾಕುತ್ತ ಬಂದರಾಯ್ತೇನು ?

ನಿರ್ವಾಣಿ – ಪ್ರೋಕ್ತರಂತೆ ?! ಅದೇಕೆ, ನಾನೇನು ಪ್ರೋಕ್ತನಲ್ಲವೇನು?

ಬಾಳಾರಾಮ – ಹಾಗಾದರೆ ಹೊಲಗೇರಿಯಲ್ಲಿ ಮರ್ರ್ಯಾ-ಶಾಮ್ಯಾ ಇಂಥವರ ಗೆಳೆತನವೇಕೆ ?

ನಿರ್ವಾಣಿ – ಎಷ್ಟೋ ಅವಾಂತರ ಕೆಲಸಗಳಿರುತ್ತವೆ ಅದಕ್ಕೂ ಇದಕ್ಕೂ ಏನು ಸಂಬಂಧ

ರಂಗರಾಯ – (ಓದುವ ಪತ್ರಿಕೆ ಕೆಳಗಿಟ್ಟು) ಬಿಡಿರೆಪ್ಪಾ—ಹರಟೆ ಹಿಂದುಗಡೆ ಇರಲಿ ಈಗ ಮೊದಲು ಕಾಫಿ ಮಾಡಿರಿ ಅದನ್ನಷ್ಟು ತೆಗೆದುಕೊಂಡು, ಒಂದರ್ಧ ತಾಸು ಇಸ್ಪೇಟು ಆಡಿಬಿಡೋಣ ಆ! ನಾನು ಸ್ವಲ್ಪ ಒಳಗೆ ಹೋಗಿ ಬರುವೆನು (ಹೋಗುವನು ಇವರೆಲ್ಲ ಕಾಫೀ ಧುನೀ ಹೂಡುವರು.)

ಮಾರುತಿ – ಬಲುಹೊತ್ತಿಗೆ ಬಂದು ಒದಗಿದ್ಯೋ ನಿರ್ವಾಣೀ !

ನಿರ್ವಾಣಿ – (ನಗುತ್ತ) ನಮ್ಮದೇನು ಹೋಗುವದು ? ದೇಸಾಯರೇ ಇದ್ದಾರೆ ಹೇಗೆ ಖರ್ಚು ಮಾಡಿದರೂ ದಕ್ಕುತ್ತದೆ

ಮಾರುತಿ – ನಮ್ಮಂಥ ನಾಲ್ಕು ಮಂದಿ ಬೇಕಾದವರಿಗಾಗಿ ಖರ್ಚು ಮಾಡದಿದ್ದರೆ ಸಾಲ ತಂದ ಹಣವನ್ನೇನು ಉಪ್ಪಿನಕಾಯಿ ಹಾಕಿಡುತ್ತಾರೆಯೇ ?

ನಿರ್ವಾಣಿ – ಅದು ಇರಲಪ್ಪಾ! ಆ ದೊಡ್ಡಮನೆ ಶಂಕರ್ಯಾನ ಫಜೀತಿ ಹೇಗೆ ಮಾಡಬೇಕು ? ತಿಳಿಯದಾಗಿದೆ

ಮಾರುತಿ – ನಿನ್ನದು ಇಂದು-ನಿನ್ನಿನ ದ್ವೇಷ ನಮಗೂ ಅವರಿಗೂ ಆದಿಬುನಾದಿಯಿಂದ ನಡೆದುಬಂದ ದ್ವೇಷ ನಮ್ಮ ಹಿರಿಯರು ಒಂದಿಷ್ಟು ಅರೆಹುಚ್ಚರು ಅವರನ್ನು ಇದೇ ಶಂಕರ್ಯಾನ ತಂದೆಯು ಭೌ ಆಗಿ ಬೆನ್ನು ಹತ್ತಿದನು ಅದರ ನೆನಪು ನನ್ನ ಮೈಯನ್ನೆಲ್ಲಾ ಸುಡುತ್ತದೆ ಏನು ಮಾಡಲಿ?

ನಿರ್ವಾಣಿ – ಏನು ಹೇಳಲೋ ಮಾರೂತೀ, ಆ ಮಗನ ಡೌಲ ? ಕೈಯಲ್ಲಿ ನಾಲ್ಕು ದುಡ್ಡು ಆಗಿವೆಯೆಂದು ಅವನ ಮೂಗು ಮೇಲಾಗಿದೆ

ಬಾಳಾರಾಮ – ದುಡಿದರೆ ನಮ್ಮ ಮೂಗೂ ಮೇಲಾಗುತ್ತದೆ

ನಿರ್ವಾಣಿ – ಅದೇಕಪ್ಪಾ, ಕತ್ತೆಯಂತೆ ದುಡಿಯುವದನ್ನು ಯಾರು ಹೇಳಿದ್ದಾರೆ ? ಈಗ ನೋಡು, ಶಂಕರ್ಯಾನು ದುಡಿಯುತ್ತಾನೆ, ನಾವು ದುಡಿಯುವದಿಲ್ಲ ದುಡಿದ ಆ ಮಗ ಏನು ಸಕ್ಕರೆತುಪ್ಪ ಊಟಮಾಡುತ್ತಾನೇ ? ಪುಂಡಿಪಲ್ಲೆ-ಹುಳ್ಳಾಸುಚ್ಚಿ! ನಮ್ಮಷ್ಟು ಸುಖ ಅವನಿಗೆಲ್ಲಿ?

ಬಾಳಾರಾಮ – ನಮಗೆ ಇಳಿಸಲಾರದಷ್ಟು ಸಾಲವದೆ, ಅದನ್ನು ಮರೆತೆಯೇನು ?

ಮಾರುತಿ – ಸಾಲವಿದ್ದರೆ ತನ್ನಷ್ಟಕ್ಕೆ ಇರತದೆ ತಿರುಗಿ ಕೊಡುವ ಮಗನಾರು!

ನಿರ್ವಾಣಿ – ಮತ್ತೊಮ್ಮೆ ಮೊಚ್ಚಿಯ ದಂಡೆಗೆ ನಿಲ್ಲಗೊಡದಿದ್ದರೂ ಚಿಂತೆಯಿಲ್ಲ! ಏನು ಮಾಡುತ್ತೀ ಬಿಸಲಪ್ಪಾ, ತಪ್ಪಿತು ಬಲೆ! ಆ ಶಂಕರ್ಯಾನ್ನ ಬಲು ರಮಿಸಿದೆ, ರಮಿಸಿದೆ! ಎರಡುನೂರು ರೂಪಾಯಿ ಕೇಳಿದೆ, ಆಗ ಇರಕಳೆತ್ತಿನಂತೆ ಒಮ್ಮೆಲೆ ಬೆದರಿ ನಿಂತನು ರೂಪಾಯಿಯೇ ಇಲ್ಲವೆಂದನು! ಆಯತ ಹೊತ್ತಿಗೆ ರೂಪಾಯಿ ಇರದಿದ್ದರೆ, ಅಷ್ಟು ಬಡಕೊಂಡು ಪ್ರಪಂಚ ಮಾಡಿ ಫಲವೇನು ?

ಮಾರುತಿ – ಉಳಿಮುಟ್ಟಿದ ಲಿಂಗದಂತೆ ನಾವು ಸದಾ ತಿರುಗಾಡುತ್ತೇವೆ. ಒಂದು ಪೈ ಗಳಿಕೆಯಿಲ್ಲ, ಆದರೆ ಬೇಡಿದ ವೇಳೆಗೆ ಬೇಡಿದಷ್ಟು ರೂಪಾಯಿ ತಂದು ಸುರುವುವ ಶಕ್ತಿಯು ಇನ್ನೂ ನಮ್ಮಲ್ಲೇ ಆದೆ

ನಿರ್ವಾಣಿ – ನನಗೂ ರೂಪಾಯಿ ಕೊಟ್ಟಿಲ್ಲ, ಮಾರೂತೀ, ನಿನ್ನ ದ್ವೇಷವೂ ಆದೆ ಹೇಗಾದರೂ! ಬಾಳಾರಾಮನು ಒಂದು ಬಿಳೀ ಆಕಳ

ಮಣಕನನ್ನು ಬಾಯಿಹಾಕಿ ಬೇಡಿದರೆ, ಆ ಮಗಾ ಶಂಕರ್‍ಯಾ ಕೊಟ್ಟಿಲ್ಲ ಯಾಕೋ ಬಾಳಾರಾಮ ?

**ಬಾಳಾರಾಮ** – ಹೌದು ಹೌದು ಅದರ ಕತೆ ಬಹಳವದೆ ಮೊದಲು ಗೆಣೆತನದಲ್ಲಿ ಸುಮ್ಮನೆ ಕುಡು ಎಂದೆ, ನಗೆಚಾಟಿಕೆಯಲ್ಲಿಯೇ ಇಲ್ಲವಂದನು ! ಆಮೇಲೆ ಹಣ ಕೊಟ್ಟುಕೊಳ್ಳುವೆ, ಉದ್ದರೀಯಿಂದ ಕೊಡು ಎಂದ ಅದಕ್ಕೂ ಹ ೦ ಅನ್ನಲಿಲ್ಲ ! ಇಂಥಾ ಘಾತುಕನವನು !!

**ನಿರ್ವಾಣಿ** – ನಮ್ಮ ಮೂರೂ ಮಂದಿಯ ಹಲ್ಲೊಳಗೆ ಆತನು ಸಿಕ್ಕಂತಾಯ್ತು ಹೇಗಾದರೂ ಮಾಡಿ ಆತನನ್ನು ಥಾಳೀಧರಕ್ಕೆ ಹಾಕಿ ಬಿಡೋಣ. ಹೇಗೋ ಮಾರೂತೀ ?

**ಮಾರುತಿ** – ಆಗಲಿ ಇದರ ಕಾಲೊಳಗೆ ನನ್ನ ಇಪ್ಪೊಂದು ಜೀವ ಹೋದರೂ ಚಿಂತೆಯಿಲ್ಲ

**ನಿರ್ವಾಣಿ** – ನೀನೋ ಬಾಳಾರಾಮಾ ?

**ಬಾಳಾರಾಮ** – ನನ್ನದೂ ಸೈ

**ಮಾರುತಿ** – ಸುಮ್ಮನೇ ಸೈ ಅಂದರೆ ಆಯಿತೇನು ?

**ಬಾಳಾರಾಮ** – ಅದೇಕೆ ? ಈ ದೇಸಾಯರ ಮನೆಯಲ್ಲಿ ನಿಂತು ಹೇಳುತ್ತೇನಪ್ಪಾ— ನನಗೆ ಮಾಡು ಎಂದ ಕೆಲಸವನ್ನು ಸರಿಯಾಗಿ ಮಾಡುವೆನು

**ನಿರ್ವಾಣಿ** .– ವಚನ ಕೊಡಿರಿ

**ಮಾರುತಿ** .– ಇದರೊಳಗೇನು ದೊಡ್ಡ ಮಾತೋ ? ಹಿಡಿ (ಕೈ ಬಡಿಯುವನು )

**ಬಾಳಾರಾಮ** – ವಚನ ಕೊಡಲಿಕ್ಕೇನು ತಪ್ಪು ? (ಮುಟ್ಟುವನು.)

**ನಿರ್ವಾಣಿ** – ಆಯ್ತು, ನೋಡಿರಿ ! ಹೀಗೆ ನಾವು ಒಂದು ಗುತ್ತಾದರೆ ನಮ್ಮ ಮುಂದೆ ಓಡಿ ಹೋಗುವವನಾರು ? ಹೇಗಾದರೂ ದೇಸಾಯರ ಗೆಳೆತನ ಅಡಿ

**ಮಾರುತಿ** – ಅವರ ರಂಗು ತಿಳಿಯುವತನಕ ಈ ಮಾತು ದೇಸಾಯರ ಮುಂದೆ ಒಡೆಯಬೇಡಿರಿ

**ಬಾಳಾರಾಮ** – ಹೌದು ! ಅವರು ಫಕ್ಕನೆ ಒಪ್ಪಿಕೊಳ್ಳದಿದ್ದರೆ ?

ನಿರ್ವಾಣಿ – ಹಾಗೇ ಮಾಡೋಣ ದೊಡ್ಡವರ ಆಸರವಿದ್ದರೆ ಯಾವ ಮಗನೂ ಏನೂ ಮಾಡುವದಿಲ್ಲ

ಎಲ್ಲರೂ – ಇನ್ನೇನು ಬಿಡೋ (ಚಪ್ಪಾಳೆ ಹೊಡೆದು ನಗುವರು)

ರಂಗರಾಯ – (ಬಂದು) ಏನು ಸಭೀಕರೇ, ಕಾಫೀ ಸಭೆಯ ಸಿದ್ಧತೆಯು ಪೂರ್ಣತೆಗೆ ಬಂತೆಂದು ಚಪ್ಪಾಳೆ ಬಡಿದು ನಮಗೆ ವಾರ್ನಿಂಗ್ ಕೊಟ್ಟರೇನು?

ಬಾಳಾರಾಮ – ಇಲ್ಲ ನಾವಿತ್ತ

ರಂಗರಾಯ – ಅದೇನೇ ಇರಲಿ, ಸಧ್ಯ ಎಲ್ಲರೂ ಕಾಫೀ ತೆಗೆದು ಕೊಳ್ಳಿರಿನ್ನು

ಬಾಳಾರಾಮ – (ಕುಡಿಯುತ್ತ) ದೇಸಾಯರೇ, ಕಾಫಿ ಆರಹತ್ತಿತು ಮೊದಲದನ್ನು ನೀವು ತಗದುಕೊಳ್ಳಿರಿ

ನಿರ್ವಾಣಿ – ಬಹಳ ಚೆಲೋ ಆಗಿದೆ ಕಾಫಿ!

ಮಾರುತಿ – ಎಷ್ಟೋ ಜನರು ಹಾಲು ಬಹಳ ಹಾಕಿ, ಸುಣ್ಣದ ರಾಡಿ ಮಾಡಿದಂತೆ ಮಾಡಿಕೊಂಡು ಕುಡಿಯುತ್ತಾರೆ ಅದು ನನಗ ಎಳ್ಳಷ್ಟೂ ಸೇರುವದಿಲ್ಲ

ರಂಗರಾಯ – ಹಾಲೂ ಬಹಳ ಹಾಕಬಾರದು ಸಕ್ಕರೆಯನ್ನೂ ಹೆಚ್ಚಾಗಿ ಬೆರಸಬಾರದು (ನೋಡಿ) ಒಹೊಹೋ—ಬರ್ರಿ ಶಂಕರಪ್ಪನವರೇ

ಶಂಕರಪ್ಪ – (ಬಂದು) ನಡೆಯಲಿ ನಡೆಯಲಿ!

ನಿರ್ವಾಣಿ – ಶಂಕರಪ್ಪನವರಿಗೆ ಸಾವಿಲ್ಲ ನೋಡಿರಿ, ದೇಸಾಯರೇ!

ಮಾರುತಿ – (ಮನದಲ್ಲಿ) ಇದ್ದರೆ ಅದು ನಮ್ಮ ಕೈಯಾಗೇ!

ರಂಗರಾಯ – ಶಂಕರಣ್ಣಾ, ಕಾಫಿ ತೆಗೆದುಕೊಳ್ಳಿರಲ್ಲ! ಮಾರೂತೀ, ಹಾಕಿಕುಡೋ

ಶಂಕರಪ್ಪ – ಛೇಛೇಛೇ! ನಾನು ಹೊಸತಾಗಿ ಕಲಿತಿಲ್ಲ

ರಂಗರಾಯ – ಏಕೆ? ನಮ್ಮಲ್ಲಿ ಕುಡಿದರೇನು ಕುಲಗೆಡುವಿರೋ?

ಶಂಕರಪ್ಪ – ಕುಲದ ಮಾತಲ್ಲ ನನಗದರ ರೂಢಿಯೇ ಇಲ್ಲ

ರಂಗರಾಯ – ಮುಂಜಾನೆಯೂ ತೆಗೆದುಕೊಳ್ಳುವದಿಲ್ಲವೋ? (ತಡೆದು) ಚಹ ತೆಗೆದುಕೊಳ್ಳುತ್ತಿರೇನು?

ಶಂಕರಪ್ಪ – ಏನೇನೂ ಇಲ್ಲ ಮುಂಜಾನೆ ಸ್ವಲ್ಪ ಹಾಲು ಆದ ರಾಯ್ತು, ಇಲ್ಲವೆ ಒಂದರಡು ರೊಟ್ಟಿ!

ಮಾರುತಿ – ಏನು ? ಈ ಪರಿ ಸಂಸಾರಮಾಡಿ ಬಂಗಾರ ಮನೆ ಕಟ್ಟಿಸುತ್ತೀರಾ ?

ಶಂಕರಪ್ಪ – ಹೊಟ್ಟೆ ತುಂಬಿದರೆ ಸಾಕು ಹೆಚ್ಚಿನದನ್ನು ಆಶಿಸುವ ಕಾಲವಿಲ್ಲ ಈಗ

ನಿರ್ವಾಣಿ – ಏನ್ರೀ ಶಂಕರಪ್ಪಾ, ಇತ್ತಿನ ಕಡ್ಡಿಯನ್ನು ಇತ್ತ ಎತ್ತಿಡದ ನಮ್ಮ ಹೊಟ್ಟೆಯೂ ತುಂಬುತ್ತದೆ ಇಷ್ಟು ಹಗಲು ರಾತ್ರಿಯೆನ್ನದೆ ದುಡಿಯುವ ನಿಮ್ಮದೂ ಹೊಟ್ಟೆಯ ಪೂರ್ತಿಯೇ ಅಂದರೆ, ನಗೆಗೀಡಾದ ಮಾತಾಯ್ತು ಮೇಲಾಗಿ ಕಲಿತವರೆಲ್ಲ ದುಗ್ಗಾಣಿಯ ಒಕ್ಕಲತನವನ್ನೇ ನಿಮ್ಮಂತೆ ಮಾಡಹತ್ತಿದರೆ ಹೆಚ್ಚಿನ ಉತ್ಪನ್ನವು ನಮಗೆ ಎಲ್ಲಿಂದ ಬರಬೇಕು ?

ಶಂಕರಪ್ಪ – ಹಾಗಾದರೆ ನಿರುದ್ಯೋಗಿಯಾಗಿ ತಿರಗಬೇಕೊ ? ಅಂದರೆ ಉತ್ಪನ್ನ ಬೆಳೆಯುತ್ತದೆ ! ಹೌದಲ್ಲವೇ ?

ಬಾಳಾರಾಮ – ಸಾಕು ಬಿಡಿರೆಪ್ಪಾ ಶಂಕರಣ್ಣನಿಗೂ ನಮಗೂ ಒರೆಯೇ ಬೀಳುವದಿಲ್ಲ ಎಂದೂ ! ಅನನು ಮಾಡಿ ಉಣ್ಣಿರಿ ಅನ್ನುವವ, ಅದೇಕೆ ಅನ್ನುವವರು ನಾವು !

ನಿರ್ವಾಣಿ – ಒಕ್ಕಲತನವನ್ನೇ ಮಾಡಬೇಕಾದರೆ ಸಾಲೆಕಲಿತು ಹೈರಣ ಆಗುವ ಕಾರಣವೇನು ? ಎಂದಿನಿಂದಲೂ ಇದೊಂದೇ ಪ್ರಶ್ನೆ ನನ್ನದು

ರಂಗರಾಯ – ನಿರ್ವಾಣೀ, ಅನಕಾ ಈ ಪ್ರಶ್ನೆ ಇರಲಿ ನಮ್ಮ ಕೆಲಸವಾಗಲಿ ! ಏನು ಶಂಕರಣ್ಣಾ, ಈ ಬಾರಿ ಎಲೆದೋಟವನ್ನು ಲಾವಣಿಗೆ ಮಾಡುವದೇನಾಯ್ತು ?

ಶಂಕರಪ್ಪ – ಮಾಡುತ್ತೇನೆ ಅಂದಿದ್ದೇನಲ್ಲಾ ! ಮೊನ್ನೆ ನಾನು ಹೇಳಿದ್ದಕ್ಕೆ ಒಪ್ಪಿದರೆ ಹೂ ಅಂದುಬಿಡಿರಿ

ರಂಗರಾಯ – ಕಡೆಗೆ ಅದೇ ಮಾತೇ ಏನು ?

ಶಂಕರಪ್ಪ – ಲೆಕ್ಕ ಹಾಕಿರಿ ಆಳು, ಎತ್ತು, ನಾವು ದುಡಿದುದಕ್ಕೆ ಏನು ಬರುತ್ತದೆ ?

ರಂಗರಾಯ – ಹಾಗೆ ಲೆಕ್ಕ ಹಾಕಿದರೆ, ಪ್ರಪಂಚ ಮಾಡುವದಕ್ಕಿಂತ ಸನ್ಯಾಸಿಯಾಗಿ ಹೋಗುವದೇ ಹಿತ ! (ಎಂದು ನಗುವನು)

ಶಂಕರಪ್ಪ – ನೌಕರರು ಎಷ್ಟು ಸುಖಪಡುತ್ತಾರೋ ಅಷ್ಟು ಸುಖವು ಒಕ್ಕಲಿಗರಿಗೆ ಇಲ್ಲದಿರುವದು ಶೋಚನೀಯವಲ್ಲವೇ ?

ರಂಗರಾಯ – ಒಳ್ಳೇದು ಶಂಕರಣ್ಣಾ, ನಿಮ್ಮಂತೆಯೇ ಆಗಲಿ ನಮ್ಮ ನಿಮ್ಮ ಕರಾರುಗಳನ್ನೆಲ್ಲ ಬರೆದಿಟ್ಟುಕೊಳ್ಳುವ ತೋಟವನ್ನು ನಿಮಗೇ ಕೊಟ್ಟಿತು, ಆಯಿತೋ ಇಲ್ಲವೋ ? ಕಾಗದಪತ್ರ ನಾಳೆನಾಡದು ಮಾಡಿಕೊಳ್ಳುವಾ

ಶಂಕರಪ್ಪ – ಒಳ್ಳೇದು ಹೋಗಿಬರುತ್ತೇನೆ (ಹೋಗುವನು)

ನಿರ್ವಾಣಿ – ಹಂಡ ಒಕ್ಕಲಿಗ್ಯಾ, ಮಗಾ ಕಮ್ಮಗೆ ಇರೋದನ್ನು ಬಿಟ್ಟು ಒಣಾ ಸೋಗು ಮಾಡಹತ್ತಿದ್ದಾನೆ

ರಂಗರಾಯ .– ಇರಲಿ–ಇರಲಿ–ಇರಲಿ ಬಿಡಿರೋ ಅವನು ನಮ್ಮ ಕೈಯೊಳಗಿಂದ ಎಲ್ಲಿ ಓಡಿ ಹೋಗುವನು ?

ಎಲ್ಲರೂ – ಹಾ ! ಕೂಡಿತು ಬಿಡಿರಿ ನೀವು ಒಳಗೆ ಹೋದಾಗ ನಾವೂ ಅದೇ ಮಾತಾಡುತಿದ್ದೆವು

( ಪರದೆ ಇಳಿಯುವವು )

## ೨ನೇ ಪ್ರವೇಶ

( ಶಂಕರಣ್ಣನ ಮನೆ ಗಂಗಾದೇವಿ ನೂಲುತ್ತ "ರಾಟಿಯೋಳ್ ದೇವನ ಕಾಣುವೆ" ಎಂಬ ಪದವನ್ನು ಹಾಡುತ್ತಿರುವಳು ಹಾಡು ಮುಗಿದಮೇಲೆ— )

ನನ್ನ ಹಂಜಿಗಳೆಲ್ಲ ತೀರುತ್ತ ಬಂದವು ಅವರು ಇನ್ನೂ ಮನೆಗೆ ಬರ ಲಿಲ್ಲವಲ್ಲ ! ದೇಸಾಯರೊಡನೆ ಮಾತಾಡುತ್ತ ಕುಳಿತಿದ್ದಾರು ಇಷ್ಟರಲ್ಲಿ ಬಂದಾರು (ನೂಲುತ್ತ) ಅವ್ವಾ, ಬಂದರಲ್ಲಾ ನೆನಸೂದರಲ್ಲೇ

ಶಂಕರಪ್ಪ – ಏಕೆ, ನನ್ನ ಹಾದಿಯನ್ನೇ ನೋಡುತ್ತ ಕಳಿತಿದ್ದಿ ಯೇನು ? ನಾನೇನು ತಡಮಾಡಲಿಲ್ಲ

ಗಂಗಾದೇವಿ – ನೀವು ತಡಮಾಡದಿದ್ದರೆ, ನಾನು ನೂಲುವುದೇ ಬೇಗ ಆಯ್ತೆನ್ನಬೇಕು

ಶಂಕರಪ್ಪ .– ನೀನು ನೂಲುತ್ತ ಕುಳಿತುದನ್ನು ನೋಡಿದರೆ, ನನಗೆ ಕದಿರೆ ರೆಮ್ಮವ್ವೆಯಂತೇ ಕಾಣಿಸುತ್ತೀ ನೋಡು

ಗಂಗಾದೇವಿ – ನಾನು ನಿಮಗೆ ಆ ಶರಣಮ್ಮನಂತೆ ಕಾಣಿಸಿದೆನೇ ? ನನಗೆ ನೂಲುವುದರಲ್ಲಿ ಆಸಕ್ತಿ, ಭಕ್ತಿ ಉಂಟಾಗುತ್ತಲಿವೆ ಕೆಲಸಬೊಗಸೆ ಗಳಿಗೆ ಬೇಸತ್ತಾಗ ಗಳಿಗೆ ನೂಲುತ್ತ ಕುಳಿತರೆ ಮನಸ್ಸಿಗೆ ಸಮಾಧಾನವಾಗು ತ್ತದೆ

ಶಂಕರಪ್ಪ – ನೀನು ನೂಲುವುದನ್ನು ನೋಡಿದರೆ ನನ್ನ ಮನಸ್ಸು ಹೇಳಲಾಗದಷ್ಟು ಸಮಾಧಾನವನ್ನು ಹೊಂದುತ್ತದೆ ಸ್ವತಃ ನೂಲುವ ನಿನ್ನ ಮನಸ್ಸಿಗೆ ಅದೆಂಥ ಸಮಾಧಾನವುಂಟಾಗುತ್ತಿರಬಹುದು !

ಗಂಗಾದೇವಿ – ಕೆಲಸವಿಲ್ಲದ ಹೆಣ್ಮಕ್ಕಳು ಕಾಲು ಹೆಣೆಹಾಕಿಕೊಂಡು ಕುಳಿತಿರುವುದನ್ನು ನೋಡಿದರೆ ನನಗೆ ತಳಮಳವಾಗುತ್ತದೆ. ನಾನು ನೂಲು ತೆಗೆದಷ್ಟು ದೂರ, ಕೈಲಾಸದ ಸಮೀಪ ಹೋದಂತೆ ನಂಬಿಗೆಯುಂಟಾ ಗುತ್ತಲಿದೆ

ಶಂಕರಪ್ಪ – ಹೌದು ನೋಡು ! ಅದಕ್ಕೇ ನಾನು ರೆಮ್ಮವ್ವೆಯ ಉಪಮೆ ಕೊಟ್ಟದ್ದು !

ಗಂಗಾದೇವಿ – ಇರಲಿ ಬಿಡಿರಿ ಹೆಂಗಳೆಯರಿಗೆ ಬಹಳ ಬಣ್ಣಿಸ ಬಾರದು ನಿಮ್ಮ ಪದರು ಹಿಡಿದ ಪುಣ್ಯದಿಂದ ನಾಲ್ಕು ಅಕ್ಷರ ಕಲಿತೆನು ಅದರಿಂದ ಒಳ್ಳೇ ಪುಸ್ತಕಗಳನ್ನು ಓದಿ ತಿಳಕೊಳ್ಳುತ್ತಿರುವೆನು ಇವೆಲ್ಲದರಿಂದ ನಾನು ಮನಸ್ಸಿನಲ್ಲಿ ಹಿಗ್ಗುತ್ತಿರುವೆನು

ಶಂಕರಪ್ಪ – ನೀನು ಮನೆಯಲ್ಲೆ ಸ್ವಲ್ಪ ಓದುಬರಹ ಕಲಿತದ್ದರ ಉಪಯೋಗವನ್ನು ಚೆನ್ನಾಗಿ ಮಾಡಿಕೊಳ್ಳುತ್ತೀ. ನೋಡು—ಎಷ್ಟೋ ತಿಳಿಗೇಡಿ ಹೆಂಗಸರು ಬರೇ ಸೋಗು ಸೋಗು ಮಾಡುತ್ತ ಕಾಲವನ್ನು ಹಾಳು ಮಾಡುತ್ತಾರೆ ಇಲ್ಲೇ ನಮ್ಮ ದೇಸಾಯರ ಹೆಂಡತಿ-ಕಾವೇರಿಬಾಯಿ ಯನ್ನು ನೋಡಿದರೆ, ನನಗೆ ಕನಿಕರವುಂಟಾಗುತ್ತದೆ ಮನೆಯಲ್ಲಿ ಬಂದು ನಿನ್ನನ್ನು ನೋಡಿದರೆ ಧನ್ಯನಾಗುತ್ತೇನೆ

ಗಂಗಾದೇವಿ – ನಾನೇನು ಹೆಣ್ಣುಮೂಳ ನನಗೇಕೆ ದೊಡ್ಡಪದವಿ? ನಾನು ತಮ್ಮ ಬೆನ್ನು ಹಿಂದಿನ ನೆರಳಿನಂತೆ! ಅದನ್ನು ಬಿಡಿರಿ ತೋಟದಲ್ಲಿ ಹೊಸ ನೆಲ ಮಾಡಿದೆ ಅದರಲ್ಲಿ ಏನೇನು ಹಾಕಬೇಕೆಂದು ಮಾಡಿದ್ದೀರಿ, ನನಗೆ ಹೇಳುವದಿಲ್ಲವೇ ?

ಶಂಕರಪ್ಪ – ಅಲ್ಲಿ ಪಂಜಾಬೀ ಗೋದಿಯನ್ನು ಹಾಕಿಸುವುದೊಳಿತು ಅದರ ಬಗ್ಗೆ ಎಲ್ಲ ಮಾಹಿತಿಯನ್ನೂ ಓದಿರುವೆ ನಾಳೆ ಒಂದಿನ ಬಿಟ್ಟು ನಾಡದು ಕೆಲಸಕ್ಕೆ ಆರಂಭಿಸುವಾ

ಗಂಗಾದೇವಿ – ನೂಲುವುದು ತೀರಿತು ಇನ್ನೇನು ಹೇಳಿರಿ

ಶಂಕರಪ್ಪ – ಇನ್ನೇನಿಲ್ಲ ಯಾವಾಗ ನೆಲಕ್ಕೆ ಬಿದ್ದೇನೆನ್ನುವಂತಾಗಿದೆ ಬೇಗನೆ ಊಟವಾಗಲಿ

ಗಂಗಾದೇವಿ – ಹಾಗಾದರೆ ನೀವೇಳುವುದೇ ತಡ

( ಪರದೆ ಇಳಿಯುವದು )

## ೩ನೇ ಪ್ರವೇಶ

(ಶಂಕರಣ್ಣನ ಹೊಲ ರಂಗರಾಯ ಮತ್ತು ಕಾವೇರಿ )

ರಂಗರಾಯ – ಅಗೋ, ಶಂಕರಣ್ಣ ಅವನ ಹೆಂಡತಿ ಏನೋ ಕೆಲಸ ಮಾಡುತ್ತಿದ್ದಾರೆ

ಕಾವೇರಿ – ಒಕ್ಕಲಿಗರು ಬಲು ಕಟುಕರು ನೋಡಿರಿ ಹೆಣ್ಮಕ್ಕಳನ್ನೂ ಹೀಗೆ ಕೆಲಸಕ್ಕೆ ಹಚ್ಚಬೇಕೇ ?

ರಂಗರಾಯ – ಒಕ್ಕಲಿಗರ ಗಳಿಕೆ ಕಡಿಮೆ ಎಲ್ಲರೂ ದುಡಿದಾಗಲೇ ಅವರ ಪ್ರಪಂಚವು ಸಾಗುವದು

ಕಾವೇರಿ – ಅದೆಲ್ಲಾ ನಿಜ ಬಡವರು ಹೀಗೆ ಬಡಕೊಂಡು ಕೆಲಸ ಮಾಡಿದರೆ ಚಂದ ಶಂಕರಣ್ಣನು ಶ್ರೀಮಂತನಾಗಿದ್ದಾನೆ ಅವನೂ ದುಡಿಯಬೇಕೆ ? ಅವನ ಹೆಂಡತಿಯೂ ಕೈಯಲ್ಲಿ ಕುರುಪೆ ಹಿಡಿಯಬೇಕೆ ?

ರಂಗರಾಯ – ಅವರದು ಮಾಡಿಮುಟ್ಟಿದ ಜೀವ ಸುಮ್ಮನೆ ಕುಳ್ಳಿರುವದಾಗದು ಹಾಗೆ ಕೆಲಸ ಮಾಡುವರೆಂತಲೇ ದೃಢಕಾಯರಾಗಿ ಆರೋಗ್ಯದಿಂದಿದ್ದಾರಲ್ಲವೇ ? ನಮ್ಮಂತೆ ಅವರು ತಿಂದು ಹೊರಳಾಡುವ ಕೀಡಿಗಳಲ್ಲ

ಕಾವೇರಿ – ಗಂಗಮ್ಮನು ಮನೆಯಲ್ಲೇ ಓದು ಬರಹ ಕಲಿತಿದ್ದಾಳೆ ಕೂಡಿದಾಗ ಓದುತ್ತಲೂ ಇದ್ದಾಳೆ ಸರಸ್ವತಿ ಒಲಿದ ಕಾಲಕ್ಕೆ ಓದಿ ಹರುಷ

ಪಡುವದನ್ನು ಬಿಟ್ಟು ಹೀಗೆ ಕೆಲಸ ಮಾಡುವದನ್ನು ಕಂಡರೆ ಆಶ್ಚರ್ಯವಾಗುತ್ತದೆ ಆಕೆಯ ವಿಚಾರವಾದರೂ ಏನಿದೆ ಯಾರಿಗೆ ಗೊತ್ತು!

ಶಂಗರಾಯ – ನಾನು ಶಂಕರಣ್ಣನ ಕಡೆಗೆ ಹೋಗುತ್ತೇನೆ ನೀನೂ ಹೀಗೆ ಬರುತ್ತೀಯೋ ಏನು ಮಾಡುತ್ತೀ ನೋಡು

ಕಾವೇರಿ – ಇಲ್ಲ ನಾನು ಗಂಗಮ್ಮನ ಕಡೆಗೆ ಹೋಗುತ್ತೇನೆ

(ಹೋಗುತ್ತಾರೆ)

ಗಂಗಮ್ಮ – (ನೋಡಿ) ಬರ್ರೀ ಕಾವೇರೀಬಾಯಿಯವರೇ!

ಕಾವೇರಿ – ಬಂದೆ ಗಂಗಮ್ಮಾ ಏನು ನಡೆದಿದೆ? ನಿಮ್ಮಂಥವರು ಹೀಗೆ ಕೆಲಸ ಮಾಡಿದರೆ ನಮಗೆ ನಾಚಿಕೆಯಾಗುತ್ತದ

ಗಂಗಮ್ಮ – ನಿಮಗೆ ನಾಚಿಕೆ ಬರುತ್ತದೆ? ಏಕೆ? ನನಗೇನೂ ನಾಚಿಕೆಯಿಲ್ಲ! ಎಂಥೆಂಥ ಇಂಗ್ರೇಜೀ ಕಲಿತ ಗಂಡಸರು ಮಂದಿಯಲ್ಲಿ ನೌಕರಿನಿಂತು, ಅವರು ಹೇಳಿದ ಕೆಲಸವನ್ನು ಮಾಡುತ್ತಾರಂತೆ! ನಮ್ಮ ಮನೆಯ ಕಲಸವನ್ನು ನಾವು ಮಾಡುವುದಕ್ಕೆ ನಾಚಿಕೆಯೇಕೆ?

ಕಾವೇರಿ – ನಿಮ್ಮಂಥ ಶ್ರೀಮಂತರೂ ಸ್ವತಃ ದುಡಿಯಹತ್ತಿದರೆ, ಕೂಲಿಯವರು ಏನು ಮಾಡಬೇಕು?

ಗಂಗಮ್ಮ – ಕೂಲಿಯವರ ಹೊಟ್ಟೆ ತುಂಬಲೆಂದು ಯಾರೂ ದುಡಿಯದೆ ಬಿಡುವದಿಲ್ಲ

ಕಾವೇರಿ – ಚಳಿಬಿಸಿಲೆನ್ನದೆ ಬೈಲಲ್ಲಿ ಕೆಲಸಮಾಡಿದರೆ ನಿಮಗೆ ತಲೆ ನೋವೇಳುವದಿಲ್ಲವೇ?

ಗಂಗಮ್ಮ – ಬಂದ ಹೊಸದರಲ್ಲಿ ಸಾವುಕಾರನ ಹೆಂಡತಿಯೆಂದು ಮಬ್ಬಿಗೆ ಬಿದ್ದು, ಮಂಗಳಗೌರಿಯಾಗಿ ಮನೆಯಲ್ಲೇ ಕುಳ್ಳಿರುತ್ತಿದೆ ಆಗ ಕೂಳು ಹೋಗುತ್ತಿದ್ದಿಲ್ಲ, ಮೇಲೆ ಮೇಲೆ ತಲೆನೋವೇಳುತ್ತಿತ್ತು ಹೊಟ್ಟೆ ಶೂಲೆಯಾಗುತ್ತಿತ್ತು ಮನೆಯ ಕೆಲಸಗಳನ್ನು ಮುಗಿಸಿ, ಹೊಲಕ್ಕೆ ಬಂದು ಕೆಲಸ ಮಾಡಹತ್ತಿದಂದಿನಿಂದ ನನ್ನ ಬೇನೆಗಳು ಓಡಿಹೋದವು; ಮನಸ್ಸಿಗೆ ಸಮಾಧಾನವಾಗಿರುತ್ತದೆ.

**ಕಾವೇರಿ** – ಏನೋ ನಮ್ಮವ್ವಾ, ನಿನ್ನ ಮಾತೇ ನನಗೆ ಅರ್ಥವಾಗುವದಿಲ್ಲ.

**ಗಂಗಮ್ಮ** – ಅವ್ವಾ, ಬಹಳ ಇಲ್ಲ ತುಸು ಬಡತನದ ಅದಲು ಹತ್ತಿದ ನಮ್ಮಂಥವರಿಗ ಅರ್ಥವಾಗುತ್ತದೆ ಗರ್ಭಶ್ರೀಮಂತರಾದ ನಿಮುಗ ಹೇಗೆ ಅರ್ಥವಾಗಬೇಕು? ನನ್ನಲ್ಲಿ "ಬಡತನ" ಎಂಬ ಪುಸ್ತಕವಿದೆ ಓದುವಂತಿದ್ದರೆ ಕಳಿಸಿಕೊಡುತ್ತೇನೆ

**ಕಾವೇರಿ** – ನನಗೇನೂ ಬೇಡವ್ವಾ! ನನ್ನಲ್ಲಿ ಬಗೆಬಗೆಯ ಕಾದಂಬರಿಗಳು ಬೇಕಾದಷ್ಟಿವೆ ನಿನಗೇ ಯಾವವು ಬೇಕು ಹೇಳು, ಕಳಿಸಿ ಕೊಡುವೆ ಇಂಥ ಪುಸ್ತಕಗಳನ್ನೋದಿದರೆ ನಮ್ಮ ದೇಶವು ಸುಧಾರಿಸುತ್ತದೆ ಸಾಹೇಬ ಜನರ ಹೆಂಗಸರನ್ನು ನೋಡಿಲ್ಲವೇ? ಹೇಗೆ ಸುಧಾರಿಸಿ, ಗಂಡಸರ ಸರಿ ಸಮಾನರಾಗಿ ಕುಳಿತಿದ್ದಾರೆ

**ಗಂಗಮ್ಮ** – ಏನೋರೆವ್ವಾ ನಿಮ್ಮ ಮಾತೇ ನನಗೆ ಅರ್ಥವಾಗುವದಿಲ್ಲ! ಅದೆಲ್ಲಾ ಇರಲಿ ಬಿಡಿರಿ ಈಗ ತಾವು ಇತ್ತ ಕಡೆಗೆ ಬಡವರ ಮನೆಗೆ ಭಾಗೀರಥಿ ಬಂದಂತೆ ಯಾವ ಕೆಲಸದ ಸಲುವಾಗಿ ಬಂದಿರಿ? ಮುಖ್ಯ ಮಾತನ್ನೇ ಮಾತಾಡಿಕೊಳ್ಳಲಿಲ್ಲವಲ್ಲಾ!

**ಕಾವೇರಿ** – ಏನೂ ಇಲ್ಲ ಸಹಜ ವಾಕಿಂಗಿಗೆಂದು ನಮ್ಮವರೂ ನಾನೂ ಕೂಡಿ ಹೊರಟಿದ್ದೆವು ಹಾದಿಯಲ್ಲೇ ನಿಮ್ಮ ತೋಟ ಆದ್ದರಿಂದ ಸ್ವಲ್ಪ ಒಳಗೆ ಹೊರಳಿದೆವು ಅವರೂ ಅತ್ತ ಶಂಕರಣ್ಣನ ಹತ್ತಿರ ಮಾತಾಡಿ ತಿರುಗಿ ಹೊರಟಿದ್ದಾರೆ, ನೋಡು ನಾನೂ ಬರುವೆನು (**ಹೋಗುವಳು**)

## ೪ನೇ ಪ್ರವೇಶ

(**ಬೀದಿ**)

**ನಿರ್ವಾಣಿ** – (**ವಿಚಾರಿಸುತ್ತ**) ಇದೇ ನಿಶ್ಚಯ! ಹೀಗೆ ಮಾಡಿದರೇ ಕೆಲಸವಾಗುತ್ತದೆ ಆರು ತಾಸು ರಾತ್ರಿ ಮೀರಿದ ಬಳಿಕವೇ ಈ ಕೆಲಸ ಮಾಡಬೇಕು ಮಾರೂತಿ ಬಾಳೂ ಇವರಿಗೂ ಈ ಮಾತು ಹೇಳಬಾರದು ನನಗೇ ಗೊತ್ತು, ನನ್ನ ಮನಸ್ಸಿಗೇ ಗೂತ್ತು ಇಗೋ, ಇದು ಕಡ್ಡಿಪೆಟ್ಟಿಗ (**ಕಿಸೆಯಿಂದ ತೆಗೆದು**) ಬೆಂಕಿ ಹೊತ್ತುತ್ತದೋ ಇಲ್ಲೋ ಮತ್ತೆ! (**ಕರೆದು**)

ಓಹೋಹೋ—ಬಹಳ ಚಲೋ ಆವೆ ಶಂಕರ್ಯಾ ಹೇಗಿದ್ದರೂ ಮನೆಯಲ್ಲಿ ಮಲಗುತ್ತಾನೆ ಆಳುಮಗವೊಂದು ಕೆಮ್ಮುತ್ತ ಪೆಟ್ಟಿಗಯ ಮೇಲೆ ಬಿದ್ದಿರುತ್ತದೆ ಪರಭಾರೆ ಆಚೆಯ ಕಡೆಗೆ ಹೋಗಿ, ಎರಡೂ ದೊಡ್ಡ ಬಣಿವಗಳಿಗೆ ಹೊತ್ತಿಸಿ ಬಂದರಾಯ್ತು! 'ದನದನ' ಉರಿಯಹತ್ತಿದ ಬಳಿಕ ನೋಡಿ, ಹೊಯ್ಕೊಂಡು ಮಂದಿಯನ್ನು ನೆರೆಸುವದರೊಳಗೆ ಅರ್ಧಕರ್ಧ ಭಸ್ಮವಾಗಿ ಹೋಗಿರುತ್ತದೆ ಆರಿಸಲಿಕ್ಕ ಬಂದ ಗೋಮುಕ್ಕಳು ನೀರು-ನಿಡಿ-ಸಲಿಗೆ-ಗುದ್ದಲಿ ಅಣಿ ಮಾಡಿಕೊಂಡು ಹೋಗುವದರಲ್ಲಿ, ಎಲ್ಲಾ ಬೂದಿಯಾಗಿಬಿಟ್ಟಿರುತ್ತದೆ! ಹೊಡೀಲಿ ಮಗಾ ಶಂಖ!! ನೂರಾರು ರೂಪಾಯಿ ಬೇಡಿದರೆ ಓಡಿಹೋಗುವವರಂತೇ ಮಾಡಿದ ಇಲ್ಲಂತೆ! ನಾಳೆ ಈ ಹೊತ್ತಿಗ ನೋಡು ಮಗನೇ-ನಿನ್ನ ಮೋರೆ ಹೇಗಾಗಿರುತ್ತದೆ! (ದೀರ್ಘವಿಚಾರ) ಎಲಾ! ಯಾಕೋ ಎದೆ ಹಾರಹತ್ತಿತು? ಸಿಗುತ್ತೇನೇನು ಮತ್ತೆ!? ನನ್ನಂಥವನ ಮೇಲೆ ಅಪವಾದ ಕೊಡುವ ಬಂಟನಾರು? ನಾ ಹೊತ್ತು ಹೊರಟರೆ ದೇಸಾಯರ ಮಗ್ಗುಲಲ್ಲಿ ಮೆರದಾಡುವವ ಇರಲಿ ಈ ಶಂಕರ್ಯಾನ ಫಜೀತಿ ಮಾಡೇಬಿಡಬೇಕು (ಅವಸರದಿಂದ ಹೋಗುವನು.)

( ಪರದೆ ಬೀಳುವದು )

## ೫ನೇ ಪ್ರವೇಶ

(ಶಂಕರಣ್ಣನ ಮನೆ)

**ಗಂಗಮ್ಮ** – (ಕೈಯಲ್ಲಿ ಪುಸ್ತಕ ಹಿಡಿದು) ಮನುಷ್ಯನು ಸಾತ್ವಿಕನಾಗಿದ್ದರೂ ವ್ಯವಹಾರದಲ್ಲಿ ಸ್ವಲ್ಪ ತಮೋಗುಣವನ್ನು ಪ್ರದರ್ಶಿಸಬೇಕೆಂದು ಈ ಪುಸ್ತಕದಲ್ಲಿ ಬರೆದದೆ! ನಮ್ಮವರಂಥ ಶುದ್ಧಸಾತ್ವಿಕರಿಗೆ ತಮೋಗುಣವನ್ನು ಪ್ರದರ್ಶಿಸಲಿಕ್ಕೆ ಬರುವಂತೆ ತೋರುವದಿಲ್ಲ ಹೊಲದೊಳಗಿನ ಎರಡು ಬಣವೆಗಳು ಒಮ್ಮೆಲೆ ಸುಟ್ಟುಹೋದವು ಮೇದು ಬಂದ ಎಮ್ಮೆಯು ನಡುರಾತ್ರಿಯಲ್ಲಿಯೇ ಸತ್ತಿತು ಹದಿನೈದು ದಿನಗಳಲ್ಲಿ ನಮ್ಮ ಮನೆಗೆ ದರೋಡೆ ಹಾಕುವೆವೆಂದು ಕಾಗದ ಅಂಟಿಸಿದ್ದಾರೆ ಇಂಥವುಗಳಿಗೆಲ್ಲಾ ಎದೆಕೊಡುವುದು ಹೇಗೋ ಏನೋ! ಏನೂ ತೋಚದು. (ಓದತೊಡಗುವಳು)

**ನೀಲಮ್ಮ** – (ಬಂದು) ಗಂಗಮ್ಮಾ, ಮನೆಯತನಕ ಬಂದರೂ ಕರೆಯಲೊಲ್ಲೆಯಲ್ಲ! ಕಣ್ಣೆತ್ತಿ ನೋಡುವುದೂ ಆಗದೇ?

ಗಂಗಮ್ಮ – (ಆತುರ) ಬರ್‍ರಿ, ಬರ್‍ರಿ! ನಾನು ನೋಡಿದ್ದಿಲ್ಲ–ನಿಮ್ಮ ಮನೆಗೆ ನೀವು ಬರಬೇಕಾದರೆ ಯಾರು ಕರೆಯಬೇಕು ಹೇಳಿರಿ!

ನೀಲಮ್ಮ – ಎಲ್ಲಿಯ ನಮ್ಮ ಮನೆ ಎಲ್ಲಿಯ ನಿಮ್ಮ ಮನೆ! ಎಲ್ಲಾ ಹಾಳಾಗಿಹೋಯಿತು ಬಾರಮ್ಮಾ!!!

ಗಂಗಮ್ಮ – (ಗಾಬರಿ) ಏನಾಯ್ತು, ನೀಲವ್ವನವರೇ! ಮೋರ ಏಕೋ ಸಪ್ಪಗೆ ಮಾಡಿದ್ದೀರಿ

ನೀಲಮ್ಮ – ನಮ್ಮ ಶೆಟ್ಟರು ಮುಂದಿಗೆ ಸಾಲಕೊಡುವದಕ್ಕಿಂತ ನಿಮ್ಮಂತೆ ನಾಲ್ಕಾರು ಹೊಲಗಳನ್ನು ಕೊಂಡುಬಿಟ್ಟಿದ್ದರೆ ಬಂಗಾರ ವಾಗುತ್ತಿತ್ತು

ಗಂಗಮ್ಮ – ಈಗೇನಾಯಿತು? ಸಾಲಗಾರರು ಬಾಯಾಡುತ್ತಾ ರೇನು?

ನೀಲಮು – ಬಾಯಾಡಿದ್ದರೆ ಒಳ್ಳೆಯದಿತ್ತು ಮುಳುಗಿಸಿಬಿಟ್ಟರು– 'ಕುಡುವದಿಲ್ಲ' ಎಂದರಂತೆ!

ಗಂಗಮ್ಮ – ಕಾಗದ ಪತ್ರಗಳಿಲ್ಲವೇ?

ನೀಲಮ್ಮ – ಎಲ್ಲಿಯ ಕಾಗದಪತ್ರ? ಊರೊಳಗಿನ ದೊಡ್ಡ ಮನುಷ್ಯರಿಗೂ ಕಾಗದಪತ್ರಗಳೇಕೆಂದು ನಮ್ಮವರು ಹೇಳಿದರು ಏಳೆಂಟು ನೂರು ಮುಳುಗಿದವು ಅಷ್ಟೇ ನಮಗ ಲಕ್ಷರೂಪಾಯಿ ಇದ್ದಂತೆ! ನಮ್ಮ ಶೆಟ್ಟರು ಎಲ್ಲಿ ಹೊಟ್ಟೆಬೇನೆ ಹಚ್ಚಿಕೊಳ್ಳುವರೋ ಏನೋ

ಗಂಗಮ್ಮ – ಹಾಗೇಕೆ ಮಾಡಿಕೊಳ್ಳಬೇಕು? ರೂಪಾಯಿ ಗಳಿಸಿ ದವರು ನಾವು! ರೂಪಾಯಿ ಮುಳುಗಿದರೆ ನಾವು ನವೆಯಬೇಕೆ? ಕೆಟ್ಟ ಜನರಿಂದ ತೊಂದರೆಗಳು ಉಂಟಾಗುತ್ತವೆ ಅವಕ್ಕೆಲ್ಲ ಅಳುತ್ತಕುಳಿತರ ಗತಿಯೇನು? ನಮ್ಮ ಎರಡು ಬಣಿವೆ ಸುಟ್ಟರು, ಎಮ್ಮೆ ಹೊಡೆದರು ದರೋಡೆಗೆ ಬರುವೆವೆಂದು ಕಾಗದ ಹಚ್ಚಿದರು, ಯಾವುದಕ್ಕ ಬೆದರಬೇಕು ಹೇಳಿರಿ ಇಷ್ಟೆಲ್ಲ ಅನರ್ಥವಾದರೂ ನಮ್ಮವರು ಗಂಭೀರವಾಗಿಯೇ ಇದ್ದಾರೆ

ನೀಲವ್ವ – ದೇಸಾಯರ ಹೊಲಗಳೆಲ್ಲ ಹೋಗಲಿಕ್ಕೆ ಕುಳಿತವೆ, ನಮ್ಮ ಕೇವವೇನು ಬಿಡಿರಿ! ನಮಗದಷ್ಟೇ ಹಣ ಮುಳುಗಿದ್ದರೂ ಹಳಹಳಿ ಯಾಗಿದೆ

ಗಂಗವ್ವ – ದೇಸಾಯರ ಹೊಲ ಹೋಗುತ್ತವೆಂದು ಹೇಳಿದಿರಲ್ಲ ಆ ಸುದ್ದಿಯೇನು?

ನೀಲವ್ವ – ಸುದ್ದಿಯೇನಿಲ್ಲ ನಮ್ಮ ಮನೆಯಲ್ಲಿ ಮಾತಾಡುತ್ತಿದ್ದರು ಹೊಲಗಳೆಲ್ಲ ವಿಜಾಪುರದ ಸಾವುಕಾರನಲ್ಲಿ ಒತ್ತಿಬಿದ್ದಿದ್ದುವಂತೆ! ಅವನು ದಾವೆಹಚ್ಚಿ ಎಲ್ಲಾ ಹೊಲಗಳನ್ನು ತನ್ನಂತೆ ಮಾಡಿಕೊಳ್ಳುವವನಿದ್ದಾನಂತೆ! ಇಂದು ನಾಳೆ ಅವರ ಮನೆಗೆ ಜಪ್ತಿಬರುವದಿದೆ

ಜಮಾದಾರ, ಶಿಪಾಯಿ, ಗೌಡ ಬರುವರು )

ಶಿಪಾಯಿ – ಶಂಕರಪ್ಪಾ ದೊಡ್ಡಮನಿ ಅನ್ನವನು ಮನ್ಯಾಗ ಇದ್ದಾನೇನು?

ಗಂಗವ್ವ – ಅವರು ಮನೆಯಲ್ಲಿಲ್ಲ, ತೋಟಕ್ಕೆ ಹೋಗಿದ್ದಾರೆ

ಜಮಾದಾರ – ಮನೆಯಾದರೂ ಇದೇ ಅಲ್ಲವೇ ಅವರದು?

ಗೌಡ – ಇದೇ ಅವರ ಮನೆ

ಗಂಗವ್ವ – ಇದೇ ಅವರ ಮನೆಯು! ಏನಾದರೂ ಕೆಲಸವಿತ್ತೇ? ಮೇಲಕ್ಕೆ ಬನ್ನಿರಿ (ಹಾಸುವಳು)

ಶಿಪಾಯಿ – ನಾವು ಕೂಡ್ರಾಕ ಬಂದಿಲ್ಲ ನಿಮ್ಮನೀ ತಪಾಸ ಮಾಡಾಕ ಬಂದೀವು

ಗಂಗವ್ವ – ಗಂಡಸರಿಲ್ಲದ ಮನೆಯಲ್ಲಿ ಏನು ತಪಾಸ ಮಾಡುವುದು ನಮ್ಮಪ್ಪಗಳಿರಾ

ಶಿಪಾಯಿ – ಅವ್ವ-ಅಪ್ಪಗಳಲ್ಲ ನಾವು! ಸರ್ಕಾರೀ ಜವಾನರಿದ್ದೇವೆ

ಗೌಡ – ಗಂಗವ್ವಾ, ಭಯಪಡುವ ಕಾರಣವಿಲ್ಲ ಒಂದಿಷ್ಟು ಕೆಲಸವಿದೆ

ಜಮಾದಾರ – ನಮ್ಮ ದೀನಸು ಸಿಕ್ಕರೆ ಪಂಚನಾಮೆ ಮಾಡುತ್ತೇವೆ ಸಿಗದಿದ್ದರೆ ಹಾಗೇ ಹೊರಳುತ್ತೇವೆ ಗಂಡಸರಿಲ್ಲದ ಮನೆಯನ್ನಲಿಕ್ಕೆ ನಾವೇನು ಕಳವಿಗೆ ಬಂದಿದ್ದೇವೆಯೋ? ಇದು ನೋಡು, ಸರಕಾರೀ

ಹುಕುಂ (ತೆಗೆದು ಹಿಡಿದು) ಇದರಲ್ಲಿ ಎಲ್ಲಾ ಬರೆದದೆ ನಿನಗೇನು ತಿಳಿಯುತ್ತದೆ?

ಗಂಗವ್ವ – ಇತ್ತ ನೋಡೋಣ ತನ್ನಿರಿ ಅದರಲ್ಲಿ ಏನು ಬರೆದದೆ? ನಾನು ಚೆನ್ನಾಗಿ ಓದಬಲ್ಲೆ

ಸಿಪಾಯಿ – ನಿನ್ನ ಕೈಯಿಂದ ಓದಿಸಬೇಕೆಂದು ನಮಗೆ ಹುಕುಂ ಕೊಟ್ಟಿಲ್ಲ ನಿಮ್ಮಲ್ಲಿ ಪರವಾನಗಿಯಿಲ್ಲದ ಬಂದೂಕವದೆ ಅಂತೆ ನಮ್ಮ ಕಡಗೆ ಮೂಕ ಅರ್ಜಿಗಳು ಬಂದಿವೆ ಸಿಕ್ಕರೆ ನಿಮ್ಮಮೇಲೆ ಖಟ್ಲೆ ಹಾಕ ಬೇಕೆಂದು ಹುಕುಂ ಕೊಟ್ಟಿದ್ದಾರೆ ಸುಮ್ಮನೆ ಕ ಮು ಕ ಮು ಓದುತ್ತ ಕುಳಿತರೆ ಹೊತ್ತು ಹೊರಡುತ್ತದೆ! ಬೇಗನೆ ನಿಮ್ಮ ಮನೆಯ ಕೋಣೆಗಳ ನ್ನೆಲ್ಲಾ ಖುಲ್ಲಾ ಮಾಡಿಕುಡಿರಿ

ಗಂಗವ್ವ – ಅವಶ್ಯವಾಗಿ ನೋಡಿಕೊಳ್ಳಿರಿ

ಜಮಾದಾರ – ಗೌಡಾ, ಪಂಚರು ಬೇಕಲ್ಲವೇ? ಎಲ್ಲಿ-ಯಾರಿದ್ದಾರೆ?

ಗೌಡ – ಎಷ್ಟು ಮಂದಿ ಬೇಕು? ಈಗಲೆ ಕರಕೊಂಡು ಬರುತ್ತದೆ

ನೀಲವ್ವ – ಇದೇನವ್ವಾ ಗಂಗವ್ವಾ?

ಗಂಗವ್ವ – ಮತ್ತೇನಿಲ್ಲ ಉಡಾಳ ಜನರು ಕುಳಿತೇನು ಮಾಡು ವರು ಊರಲ್ಲಿ? ನಾಲ್ಕು ಅಕ್ಷರ ಕಲಿತದ್ದನ್ನು ಮೂಕರ್ಜಿ ಮಾಡುವುದು ಮತ್ತು ಗೋಡೆಗಳಿಗೆ ಏನಾದರೂ ಬರೆದು ಕಾಗದ ಹಚ್ಚುವುದು, ಇಂಥಾ ಅವಿವೇಕತನದಲ್ಲಿಯೇ ಉಪಯೋಗಿಸುತ್ತಾರೆ

ನೀಲವ್ವ – ಒಳ್ಳೇ ಜನರಿಗೆ ಈಗ ದಿನಮಾನವಿಲ್ಲ ನೋಡವ್ವಾ!

ಜಮಾದಾರ – ಅವ್ವಾ, ಒಳ್ಳೇ ಜನರಿಗೆ ದಿನಮಾನ ಏಕಿಲ್ಲ? ನೀವು ಇಂಥ ಕಾರಭಾರ ಮಾಡಬೇಕೆಂದು ಹೇಳುತ್ತಾರೇನು ಯಾರಾದರೂ?

ಗಂಗವ್ವ – ಹಾಗೇನೂ ಇಲ್ಲ ಬಿಡಿರಿ

ಸಿಪಾಯಿ – ಪಂಚರನ್ನು ಕರಕೊಂಡು ಬಂದ ಗೌಡ ನಡೆಯಿರಿ ಒಳಗೆ (ಹೋಗುವರು)

## ೬ನೇ ಪ್ರವೇಶ

(ಬೇವಿನಕಟ್ಟೆ ಬಾಳಾರಾಮು, ನಿರ್ವಾಣಿ)

**ಬಾಳಾರಾಮು** – ನನ್ನ ಬಲೆಯಲ್ಲಿ ಬೇಕಾದಷ್ಟು ಮಂದಿ ಬಿದ್ದಿದ್ದಾರ ಆದರೆ ಶಂಕರಣ್ಣ ಮಾತ್ರ ಮೀನಿನ ಮರಿ ಇದ್ದಾನೆ, ಮೀನಿನ ಮರಿ! ಏನೂ ಅಡ್ಡಿಯಿಲ್ಲ ಮೀನಿನ ಮರಿ!!

**ನಿರ್ವಾಣಿ** – ನಾ ಮೊನ್ನೆ ರಾತ್ರಿ ಗುಪ್ತದಿಂದ ಒಯ್ದು ಮುಚ್ಚಿಟ್ಟು ಬಂದ ಬಂದೂಕು ಪೋಲಿಸರಿಗೆ ಸಿಗಲಿಲ್ಲ ಹೇಗೆ ಸಿಗಲಿಲ್ಲ?

**ಬಾಳಾರಾಮು** – ಬಂದೂಕ ನೀನೇ ಒಯ್ದು ಮುಚ್ಚಿಟ್ಟು ಬಂದಿದ್ದೆಯಾ? ಎಲಾ ತುಂಟಾ ನನಗೆ ಹೇಳೇ ಇಲ್ಲ? ಮೂಕರ್ಜಿ ಮಾತ್ರ ತೋರಿಸಿದಿ ಛೀ ಹುಚ್ಚಾ, ಅದೇ ರಾತ್ರಿ ನಾನು ಅವರ ಮನೆಗೆ ಕಳವಿಗ ಹೋಗಿದ್ದೆ ಆಗ ಅಲ್ಲಿ ನನಗೆ ಆ ಬಂದೂಕು ಸಿಕ್ಕಿತು ಹಿಗ್ಗಿ ನಾನು ಎಲ್ಲಾ ಬಿಟ್ಟು ಅದೊಂದನ್ನೇ ತೆಗೆದುಕೊಂಡು ಓಡಿಬಂದೆನು ಸ್ವಲ್ಪದರಲ್ಲೇ ಎಲ್ಲಾ ಕೆಟ್ಟುಹೋಯಿತಲ್ಲೋ! ಆದರೆ—ನೀನೂ ಬಲು ಕುನಸು ಹಿಡಿಯುವವ ಸಾಲ ಕೊಡದಿದ್ದರ ಹೀಗೆ ಮಾಡಬೇಕೇನು? ಹೊಟ್ಟೆಗಿಲ್ಲದಿದ್ದರೆ ಒಕ್ಕಳಿಕ್ಕಳು ಒಯ್ ಅಂದಿದ್ದನು

**ನಿರ್ವಾಣಿ** – ನಮಗೆ ಬೇಕಾಗಿದ್ದು ರೂಪಾಯಿ, ಕೊಡಲಿಕ್ಕೆ ಬಂದದ್ದು ಜೋಕ!

**ಬಾಳಾರಾಮು** – ಮಾರುತಿ ನಾಲ್ಕು ದಿನವಾಯ್ತು ಕಾಣೋದಿಲ್ಲ, ಎಲ್ಲಿ ಹೋಗಿದ್ದಾನೆ?

**ನಿರ್ವಾಣಿ** – ಆ ಸಾವುಕಾರ ನೀಲಮ್ಮನ ಗಂಡ ಭೋಳ್ಯಾಶೆಟ್ಟಿ ಇದ್ದಾನಲ್ಲಾ, ಅವನ ಎಂಟು ನೂರು ರೂಪಾಯಿ ನೆಗವಿಹಾಕಿ, ಈಗ ಒಂದು ಕುಳವನ್ನು ಓಡಿಸಿಕೊಂಡು ಒಯ್ದಿದ್ದಾನೆ ನಿನ್ನೆ ಉಡಿಕೆ ಮುನ್ನೂರು ನಾನೂರು ಹೊಡಕೊಂಡು ಬರುತ್ತಾನೆ! ಬಾಳೂ, ಮಾರುತಿಯು ಬಲು ವಿಶ್ವಾಸಿಕ ಮನುಷ್ಯ ಹುಣ್ಣಿಗೆ ಕಟ್ಟಿಕೊಳ್ಳಬೇಕು! ಪ್ರಸಂಗ ಬಿದ್ದರೆ ಜೀವದ ತನಕ ಶರತು!

ಬಾಳಾರಾಮ – ನೀವಿಬ್ಬರು ತಲೆತಿರೆದು ನಿಂತಿರುವಿರೆಂದು ನಮ್ಮೂರು ಮಣಿದದೆ ಇಲ್ಲದಿದ್ದರೆ ಕೆಟ್ಟ ಬೆರಿಕೆ ಜನರು! ದೇಸಾಯಿಯೂ ನಿಮ್ಮ ಗೆಳೆತನವನ್ನು ಏತಕ್ಕೆ ಕಟ್ಟಿದ್ದಾನೆ? ಇರಬೇಕು ಪ್ರಸಂಗದಲ್ಲಿ ಬಲವುಳ್ಳವರ ಆಸರ, ಎಂದು

ನಿರ್ವಾಣಿ – ದೇಸಾಯಿ ಮಂಗಾ–ಡೌಲಿಟ್ಟ, ಚೈನೀ ಹೊಡೆದಾ ಹೊಲ ಹೋದವು! ಇನ್ನೇನು?

ಬಾಳಾರಾಮ – ಹೌದು ಹೊಲ ಹೋದವಂತೆ ಏನೂ ಉಳಿಯ ಲಿಲ್ಲವೇ?

ನಿರ್ವಾಣಿ – ಒಂದು ತೋಟ ಮಾತ್ರ ಅದೆ ಉಳಿದ ಹೊಲಗಳನ್ನು ಇಪ್ಪತ್ತು ವರುಷಗಳಲ್ಲಿ ಸಾಲ ತೀರಿಸಿದರೆ ಬಿಟ್ಟುಕೊಡುವ ಕರಾರವಿದೆ ಇಪ್ಪತ್ತು ವರುಷವೆಲ್ಲಿ? ದೇಸಾಯಯೆಲ್ಲಿ?

ಬಾಳಾರಾಮ – ಹೌದು ನೂರಾರು ಹೊಲಗಳಿದ್ದಾಗ ಸಾಲಮಾಡಿ ಕೊಂಡವನು, ಒಂದೇ ತೋಟದಿಂದ, ಅಷ್ಟೆಲ್ಲ ಹೋದ ಹೊಲಗಳನ್ನು ಹೇಗ ಸಂಪಾದಿಸುವನು?

ನಿರ್ವಾಣಿ – ಅದೇ ಅನ್ನುತ್ತೇನೆ! ನಾನಂತೂ ಅವರ ಮನೆಗೆ ಕಾಲು ಹಾಕುವದಿಲ್ಲ ಈಗ ಅವನಿಗೆ ಅಂಗಡಿಯಲ್ಲಿ ಉದ್ದರಿ ಸಹ ಸಿಗುವದಿಲ್ಲ

ಬಾಳಾರಾಮ – ನೌಕರಿ ಹಿಡಿಯಬೇಕು ಎಲ್ಲಾದರೂ! ಹೇಗಾದರೂ ಕಲಿತವನಿದ್ದಾನೆ

ನಿರ್ವಾಣಿ – ರಂಗರಾಯನ ತಂದೆಯು ಸಾಯುವ ಕಾಲಕ್ಕೆ ವಚನ ತೆಗೆದುಕೊಂಡಿದ್ದಾನೆ, ನೌಕರಿ ಮಾಡಕೂಡದೆಂದು

ಬಾಳಾರಾಮ – ಜಟ್ಟು ಕಡಿಯಿತು ಇನ್ನೇನು? 'ಓಂ ಭವತಿ ಭಿಕ್ಷಾಂ ದೇಹಿ'! ಅಗಾ ನಿರ್ವಾಣೀ, ಹೊತ್ತು ಆಯ್ತು ಊಟದ್ದು–ಮನೆಗೆ ಊಟದ ಹೊತ್ತಿಗಾದರೂ ಸರಿಯಾಗಿ ಹೋಗೋಣ, ಮುದುಕ–ಮುದುಕಿ ಬಡಿದು ಹಾಕುತ್ತಾರೆ

ನಿರ್ವಾಣಿ – ಏನು ಧರ್ಮಕ್ಕೆ ಹಾಕುತ್ತಾರೆ? ಮಕ್ಕಳು ತಿರುಗಾಡಿ ಉಂಡರೆ ಅವರಿಗೆ ಅಕ್ಕರತೆಯೇ ಇರುತ್ತದೆ!

(ಹೋಗುವರು)

## ೭ನೇ ಪ್ರವೇಶ

(ಶಂಕರಣ್ಣನ ಮನೆ ಶಂಕರಣ್ಣ ಮತ್ತು ರಂಗರಾಯ)

ರಂಗರಾಯ – ಏನು ಮಾಡಬೇಕು ಶಂಕರಣ್ಣಾ, ಏನೂ ತಿಳಿಯದಾಗಿದೆ

ಶಂಕರಣ್ಣ – ದೇಸಾಯರೇ

ರಂಗರಾಯ – ಶಂಕರಣ್ಣಾ, ದೇಸಾಯಿ ಅನ್ನಬೇಡಿರಿ ನನಗ! 'ರಂಗಾ' ಅನ್ನಿರಿ

ಶಂಕರಣ್ಣ – ನಿಮಗೆ 'ದೇಸಾಯಿ' ಅನ್ನುವದು ಶ್ರೀಮಂತಿಕೆಗಾಗಿ ಅಲ್ಲ, ನಿಮ್ಮ ವಿದ್ವತ್ತೆಗಾಗಿ ಅನ್ನುವೆನು, ಆಯ್ತಿಲ್ಲೋ?

ರಂಗರಾಯ – ಶಂಕರಾ, ಸುಡು! ನನ್ನ ವಿದ್ವತ್ತೆಯಿರಬೇಕಾದರೆ ನನ್ನ ಸ್ಥಿತಿಯು ಹೀಗೇಕೆ ಆಗುತ್ತಿತ್ತು?

ಶಂಕರಣ್ಣ – ನಿಮ್ಮಂಥ ಸುಶಿಕ್ಷಿತರು ಹೀಗೆ ಕೈಕಾಲು ಕಳಕೊಂಡರೆ ಉಳಿದವರ ಗತಿಯೇನು?

ರಂಗರಾಯ – ಸುಡು ನನ್ನ ಸುಶಿಕ್ಷಿತತನ!

ಶಂಕರಣ್ಣ – ಇರಲಿ, ಏನಿದ್ದರೂ ನಮ್ಮಿಂದ ನಾವೇ ಜಾಣರಾಗಬೇಕಲ್ಲವೇ? ಇಲ್ಲದಿದ್ದರೆ ಯಾರೂ ಮೂಸಿನೋಡುವದಿಲ್ಲ ನಮ್ಮನ್ನು!

ರಂಗರಾಯ – ಹೌದು ನಿಮ್ಮ ಅಭಿಪ್ರಾಯವು ಸರಿಯಾಗಿದೆ ನೀವು ಇಂಗ್ರೇಜಿ ಕಲಿಯದಿದ್ದರೂ ನಿಮ್ಮ ಉದ್ಯೋಗಮಾಡುತ್ತ ಯೋಗ್ಯರಾಗಿ ಇದ್ದದ್ದು, ನಮ್ಮನ್ನೆಲ್ಲ ನಾಚಿಸುತ್ತದೆ ಒಕ್ಕಲತನದಲ್ಲಿ ಎಷ್ಟೋ ಸುಧಾರಣೆಮಾಡಿ ಉತ್ಪನ್ನ ಬೆಳಿಸಿದಿರಿ ನಿಮ್ಮ ತಂದೆ ಸತ್ತಾಗ ಬರೇ ಹಾಳು ಮನೆಯೊಂದಿತ್ತು! ಎರಡು ತೋಟ, ದೊಡ್ಡ ಮನೆ ಆದದ್ದು ನಿಮ್ಮ ಕರ್ತೃತ್ವದಿಂದಲೇ ಅಲ್ಲವೇ? ನನ್ನನ್ನು ನೋಡಿರಿ ನನ್ನ ತಂದೆಯೋ ಅಜ್ಜನೋ ನೂರಾರು ಹೊಲಗಳನ್ನು ಮಾಡಿದ್ದರು, ಅವುಗಳನ್ನು ನಾನು ಕಳಕೊಂಡೆನು ಹೊತ್ತು ಹೊರಟರೆ ನೌಕರಿ ಹಿಡಿಯಬೇಕು, ಇಲ್ಲವೆ ಭಿಕ್ಷೆಗೆ ಹೋಗಬೇಕು ಕಲಿತವರು ಹೀಗೆ ಅಲ್ಲಾಕುಲ್ಲಿಯಾಗುವದು ಮಂದಿಯಲ್ಲಿ ನಗೆಗೇಡು ಅಲ್ಲವೇ?

ಶಂಕರಣ್ಣ – ಏತರ ನಗೆಗೀಡು? ದೊಡ್ಡ ದೊಡ್ಡ ರಾಜರು ರಾಜ್ಯವನ್ನು ಕಳಕೊಂಡು ವನವಾಸಕ್ಕೆ ಹೋದರೆಂಬದನ್ನು ನಿಮಗೆ ಬೇರೆ ಹೇಳುವ ಕಾರಣವಿಲ್ಲ ಸಂಸಾರವೆಂದ ಬಳಿಕ ಸುಖದ ಏರಿಳಿವುಗಳು ಬಂದೇ ಬರುತ್ತವೆ

ರಂಗರಾಯ – ನಾನು ಇನ್ನುಮೇಲೆಯೂ ಮೊದಲಿನಂತೆ ಕುಳಿತರೆ, ಸುಖವು ಎಂದೆಂದೂ ಸಿಗಲಿಕ್ಕಿಲ್ಲ ನಮ್ಮ ಮೈಯೊಳಗಿನ ಸೊಕ್ಕು! ಹೊಲಗಳನ್ನು ಸಿಕ್ಕವರಿಗೆ ಹಚ್ಚಿದೆನು, ಸಿಕ್ಕಂತೆ ಹಚ್ಚಿದೆನು! ಚಾಂಡಾಳಚೌಕಡಿಯ ಗೆಳೆತನ ಬೇರೆ! ಸುಶಿಕ್ಷಿತ ದಂಪತಿಗಳು ನಾವು! ಚಹಾ, ಸಿಗರೇಟು, ಪುರಿ, ಬಾಸುಂದಿಯ ಪ್ರಸ್ತ ಬೆಳೆದು ಈಗ ನಮ್ಮ ಶ್ರಾದ್ಧವು ಬಂದು ಕುಳಿತದೆ

ಶಂಕರಣ್ಣ – ಮುಂದೆ ಮಾಡಬೇಕೆನ್ನುವದೇನು?

ರಂಗರಾಯ – ಏನು ಮಾಡಲಿ? ನೌಕರಿಯ ಹಿಡಿದರೆ ತಂದೆಗೆ ಕೊಟ್ಟ ವಚನವು ಮಣ್ಣುಗೂಡುತ್ತದೆ ಏನು ಮಾಡಲಿ? ನೌಕರೀ ಆಶೆಯನ್ನಂತೂ ತೆಗೆದುಹಾಕುತ್ತೇನೆ ನಮ್ಮ ತಂದೆಯು ನೌಕರಿ ಮಾಡುವಾಗ ಅದರ ಅನುಭವನ್ನುಂಡೇ ನನ್ನ ಕೈಯಿಂದ ವಚನ ತೆಗೆದುಕೊಂಡಿದ್ದಾರೆ ನೌಕರಿಯಲ್ಲಿ ಸುಖವಿಲ್ಲವೆಂಬದನ್ನು ನಾನೂ ನೋಡುತ್ತಿದ್ದೇನೆ ಒಲ್ಲೆ, ನೌಕರಿ ಒಲ್ಲೆ!

ಶಂಕರಣ್ಣ – ಮತ್ತೇನು ಮಾಡಬಲ್ಲಿರಿ, ನಿಮ್ಮ ಒಲವು ಯಾತರಲ್ಲಿದ?

ರಂಗರಾಯ – (ವಿಚಾರಿಸಿ) ಹೇಳಲಿಕ್ಕೇ ಬರಲೊಲ್ಲದು ನನ್ನ ಒಲವೇ ನನಗೆ ತಿಳಿಯದು

ಶಂಕರಣ್ಣ – ಹಾಗಾದರೆ ಬನ್ನಿರಿ ನಮ್ಮ ಸಾಲೆಗೆ!

ರಂಗರಾಯ – ಶಂಕರಣ್ಣಾ, ಇದಕ್ಕೆ ನನ್ನ ಒಪ್ಪಿಗೆ ಅದೆ ಆದರೆ ನನ್ನಿಂದ ಆ ಕೆಲಸವು ಆದೀತೇ?

ಶಂಕರಣ್ಣ .– ಆಗದೇನು ಮಾಡುತ್ತದೆ? ನಾನು ಹೇಳಿದಂತೆ ಮಾಡಿರಿ

ರಂಗರಾಯ .– ಏನು ಹೇಳುತ್ತೀರಿ ಹೇಳಿರಿ

ಶಂಕರಣ್ಣ – ನಿಮಗುಳಿದದ್ದು ಒಂದು ತೋಟವಲ್ಲವೇ? ಒಂದು ಆಳು, ಎರಡು ಎತ್ತು ಆದರೆ ಸಾಕು ಆರಂಬಕ್ಕೆ ನೀವು ಹಾಗೇ ಒಕ್ಕಲ

ನದ ಅಭ್ಯಾಸ ಮಾಡಿರಿ ನನ್ನಲ್ಲಿ ಬೇಕಾದಷ್ಟು ಪುಸ್ತಕಗಳಿವೆ, ಅವನ್ನೊಯ್ದು ಅಭ್ಯಾಸ ಮಾಡಿರಿ

ರಂಗರಾಯ – ಅಭ್ಯಾಸ!?

ಶಂಕರಣ್ಣ – ಅಭ್ಯಾಸವೆಂದರೆ ಸಾಲೆಯಲ್ಲಿ ಓದಿದಂತಲ್ಲ ನಮ್ಮ ಪ್ರಪಂಚಕ್ಕೆ ಉಪಯುಕ್ತವಾದ ಜ್ಞಾನವನ್ನು ಮಾಡಿಕೊಂಡರೆ ಅದೇ ಅಭ್ಯಾಸವಾಗುತ್ತದೆ ನಿಮ್ಮಂಥವರು ತಿಂಗಳೆರಡು ತಿಂಗಳಲ್ಲಿಯೇ ಒಕ್ಕಲತನದ ಅಭ್ಯಾಸ ಮಾಡಬಹುದು ಆ ಅಭ್ಯಾಸದಿಂದ ಅನುಭವ ಪಡೆಯುತ್ತ ಹೋದರಾಯ್ತು ನಿಮಗೆ ನಾನೂ ನನ್ನ ಅನುಭವವನ್ನು ತಿಳಿದಷ್ಟು ಹೇಳುವೆನು

ರಂಗರಾಯ – ಹೀಗೇನು!

ಶಂಕರಣ್ಣ – ಅನುಮಾನಬೇಡ!

ರಂಗರಾಯ – ಶಂಕರಣ್ಣಾ, ನನ್ನ ತಲೆಯೊಳಗಿನ ಮಬ್ಬು ಹರಿಯಿತು ಬಿಡಿರಿ! ನೀನು ನಿಜವಾಗಿ ಆದರ್ಶಪುರುಷನು ನೀವು ಅನುಸರಿಸಿದ ಹಾದಿಯನ್ನು ನಾವೆಲ್ಲ ಹಿಡಿದರೆ ನಮ್ಮ ಸುಖದ ಹಾದಿಯು ದೂರವಿಲ್ಲ ನೀವು ನಿಜವಾಗಿ ಶಂಕರನೇ ಆಗಿರುತ್ತೀರಿ! ಶಂಕರಣ್ಣಾ ನೀವು ನನಗೆ ಮಹಾತ್ಮರಂತೆ ಕಾಣಿಸುತ್ತಿರುವಿರಿ, ನೀವು ನನಗೆ ಪೂಜ್ಯರಾಗಿ ಅನಿಸಹತ್ತಿರುವಿರಿ, ನೀವು ದೇವದೂತರಂತೆ ಭಾಸವಾಗಹತ್ತಿರುವಿರಿ ಶಂಕರಣ್ಣಾ, ನಿಮ್ಮ ಪಾದಗಳಾದರೂ ನನಗೆ ಸುಖಶಾಂತಿಗಳನ್ನು ಕೊಡಲಿ (ಎಂದು ನಮಸ್ಕರಿಸಲಿಕ್ಕೆ ಹೋಗುವನು)

ಶಂಕರಣ್ಣ :– ಇದೇನು ರಂಗರಾಯರೇ (ಎಂದು ಹಿಡಿದೆಬ್ಬಿಸುವನು)

ರಂಗರಾಯ – ಶಂಕರಣ್ಣಾ, ನಾವೆಲ್ಲಾ ನಿಮ್ಮ ಪ್ರಪಂಚವನ್ನು ನೋಡಿ ಮತ್ಸರಪಡುತ್ತಿದ್ದೆವು ನಿಮ್ಮ ನಡಾವಳಿಯನ್ನು ಕಂಡು ಹಳಿಯುತ್ತಿದ್ದೆವು ನಿಮ್ಮ ಆರೋಗ್ಯಕ್ಕೆ ಕೊರಡು ಎಂದ ನಿಂದಾತ್ಮನು ನಾನೇ ನಿಮ್ಮ ಪತ್ನಿ ಗಂಗಮ್ಮನ ದುಡಿತಕ್ಕೆ ಕಾಡುಹೆಂಗುಸೆಂದು ಬೊಗಳಿದ ನಾಯಿಗಳಲ್ಲಿ ನಾನೂ ಒಬ್ಬ! ಆ ಸಾಧ್ವಿಯು ನೂಲುವುದು ನಮ್ಮ ಕಣ್ಣಿಗೆ ಚುಚ್ಚುವಂತಾಗುತ್ತಿತ್ತು ಶಂಕರಣ್ಣಾ, ನನ್ನ ತಪ್ಪುಗಳನ್ನೆಲ್ಲ ಬಿಚ್ಚಿ ನಿಮ್ಮ ಮುಂದೆ ಇಟ್ಟಿರುವೆನು ನನ್ನನ್ನು ಕ್ಷಮಿಸಬೇಕು (ಕೈಜೋಡಿಸುವನು)

ಶಂಕರಣ್ಣ — ರಂಗರಾಯರೇ, ಮೊದಲು ನಿಮ್ಮ ಮೇಲಿದ್ದ ಸ್ನೇಹವು ಈಗ ನೂರ್ಮಡಿ ಆಯಿತು ನಿಮ್ಮ ಸರಳ ಹೃದಯವನ್ನು ಕಂಡು ನನ್ನ ಕಣ್ಣಿನ ಸಿಂಪೆಗಳು ನೀರು ಹನಿಗಳನ್ನು ಹತ್ತವು ನೀವು ಯಾವ ರೀತಿಯಿಂದಲೂ ನನ್ನ ಸ್ನೇಹಕ್ಕೆ ಭಂಗಬರಗೊಡಬೇಡಿರೆಂದು ನಾನು ಬಿನ್ನವಿಸಿಕೊಳ್ಳುತ್ತೇನೆ

ರಂಗರಾಯ — ಶಂಕರಣ್ಣಾ, ನನ್ನಲ್ಲಿ ಒಂದು ತರದ ಹೊಸ ಶಕ್ತಿಯೇ ಉಂಟಾಯ್ತು

ಶಂಕರಣ್ಣ — ರಂಗರಾಯರೇ, ನಿಮ್ಮಂಥವರು ಸಿಂಹವಿದ್ದಂತೆ ನೀವು ನಿಮ್ಮ ವಂಶದ ಮೇಲ್ಮೆಯನ್ನು ಮರೆಯದಿದ್ದರೆ ನಿಮ್ಮಿಂದ ಬಹು ಜನರಿಗೆ ಕಲ್ಯಾಣವಾಗುವದು ಆದರೆ ಇದಕ್ಕೆ ಬದಲಾಗಿ ಇಲಿಗಳಿಗೆಲ್ಲ ಸೈಲ ಕೊಟ್ಟು ನಿಮ್ಮಂಥವರು ಅಂಥವರ ಕೈಯೊಳಗಿನ ಗೊಂಬೆಗಳಾಗಿ ಬಿಟ್ಟರೆ ಬಹು ಜನರಿಗೆ ಅಕಲ್ಯಾಣವಾಗುತ್ತದೆ

ರಂಗರಾಯ — ಶಂಕರಣ್ಣಾ, ತಿಳಿಯಿತು ಬಿಡಿರಿ! ಆ ಚಂಡಾಳ ಚೌಕಡಿಯ ಚಿಪ್ಪಾಡೆ ಹಾರಿಸಿಕೊಟ್ಟರಾಯತಿಲ್ಲೋ! !

(ಪರದೆ ಇಳಿಯುವದು)

## ೮ ನೇ ಪ್ರವೇಶ

( ಬೀದಿ ಇಬ್ಬರು ಸಿಪಾಯರು, ಬಂಧಿತರಾದ ನಿರ್ವಾಣಿ ಮಾರುತಿ ಬರುವರು )

ನಿರ್ವಾಣಿ — ದೇಸಾಯರ ಭೆಟ್ಟಿಯನ್ನೂ ಆಗಗೊಡುವದಿಲ್ಲವೇ?

ಸಿಪಾಯಿ — ಹಾಗೆ ನಮಗೆ ಹುಕುಂ ಬಂದಿಲ್ಲ ಮಹಾರಾಜ ಸರ್ಕಾರದ ಹುಕುಂ ನಾವು ಹೈಗ್ಯ ಮಾಡೋದಿಲ್ಲ ತಿಳಿತೇನು?

ನಿರ್ವಾಣಿ — ಯಾತರಲ್ಲಿ ಏನೂ ಇಲ್ಲ ಸುಮ್ಮಸುಮ್ಮನೆ ಬಂದ ಬಳಿಕ ಏನು ಮಾಡಬೇಕು? ಇಂಥಾ ಕುರುಡ ಸರಕಾರ ಇರೂತನಕ

ಸಿಪಾಯಿ — ಅರೇ! ಬಕಾಸ ಬೇಡ್! ನೋಡು ಹಂಟರ್! ತಿಳಿತೇನು?

ನಿರ್ವಾಣಿ — ನಮ್ಮನ್ನು ಇಲ್ಲಿ ಏಕೆ ತರುಬಿಕೊಂಡು ನಿಲ್ಲಬೇಕು?

ಸಿಪಾಯಿ — (ಮನ) ನೆರೆದ ಮುಂದೀ ಮುಂದ ಮಂಗ್ಯಾನಾಟ ಆಡಿಸಾಕ! (ಪ್ರ) ನಿಮಗೆ ಹಾದೀ ರೊಟ್ಟಿ ಬ್ಯಾಡ? ಗೌಡ ತಂದು ಕೊಡುತ್ತಾನೆ

ಮಾರುತಿ – ಅಲ್ಲಿ ಮುಂದಕ್ಕೆ ಹೋಗಿ ನಿಲ್ಲೋಣ ಬರ್ರಿ ( ಎಂದು ಮುಂದರಿಯುವನು )

ಸಿಪಾಯಿ – ಅರೇ ! ಮುಚ್ಚು ಬಾಯಿ !

ನಿರ್ವಾಣಿ – (ಕೈಮಾಡಿ) ಅವರೂ ಇದರಾಗ ಇದ್ದವರೇರೀ !!

ಸಿಪಾಯಿ – ಮುಚ್ಚು ಬಾಯಿ !!!

ಮಾರುತಿ – (ಸೂಚಿಸಿ) ನಾನೂರು ಕೊಡುತ್ತೇವೆ ನಮ್ಮ್ಯಾಕ್ಟರನ್ನೂ ಬಿಡಿರಿ

ಸಿಪಾಯಿ – ನಾವು ಅಂಥಾ ಉಸಾಬರಿ ಮಾಡವರಲ್ಲಾ ಇಮಾನೀ ನೌಕರ್ ! ತಿಳಿತೇನು ಏನಂತ ತಿಳದೀದಿ ಹರಾಂ !

ನಿರ್ವಾಣಿ – ನಾನು ಲೋಕಲ್‌ಬೋರ್ಡ ಮೆಂಬರ ಆಗುವವನಿದ್ದೆ ಇದೇನು ಪೇಚಾಟ ಬಂದಿತಪ್ಪಾ ! ನಮ್ಮ ನಾನೂರು ತಗೋ ನಾ ಮೆಂಬರ ಆದಬಳಿಕ ನಿನಗೆ ಬಡತೀ ಮಾಡುತ್ತೇನೆ ಹಿಡಿ ವಚನ

ಸಿಪಾಯಿ – ರಾವಸಾಹೇಬ, ಅದೆಲ್ಲಾ ಮರೀರಿ !!! ಬದ್ಮಾಷ್ ಛಾಂಚೋದ್ ಚಲೋ

(ಹೋಗುವರು )

## ೮ನೇ ಪ್ರವೇಶ

(ದೇಸಾಯರ ಮನೆ)

ಕಾವೇರಿ – (ಚಿಂತೆಯಿಂದ) ಜನರಲ್ಲಿ ಏನು ನಗೆಗೀಡಾಯ್ತು ನಮ್ಮ ಬಾಳ್ವೆ !! ಸುಶಿಕ್ಷಿತರು ನಾವು ದಂಪತಿಗಳು ಶ್ರೀಮಂತರು ಬೇರ ಇವೆರಡರಿಂದ ನಾವು ಯಾರಿಗೂ ಅಡಿವೆರಗಾಗಬೇಕಾಗಿದ್ದಿಲ್ಲ ಇಂಥ ದುಃಸ್ಥಿತಿಯು ಬರಬಹುದೆಂದು ಕನಸಿನಲ್ಲಿಯೂ ಬಂದಿದ್ದಿಲ್ಲವಲ್ಲ ! ಒಮ್ಮೆಲೆ ಇಂಥ ಭಯಂಕರ ಸ್ಥಿತಿ ಬಂತು ! (ವಿಚಾರ ಮಗ್ನಳಾಗುವಳು )

ರಂಗರಾಯ – (ಬಂದು) ದೇವಿಯು ಏಕೋ ತುಂಬಿಕೊಂಡು ಕುಳಿತಿದ್ದಾಳೆ ದೇವೀ, ಹೀಗ ತುಂಬಿಕೊಂಡು ಕುಳ್ಳಿರಬೇಡ ಬೇಗನೇ ವರ ಕೊಡು (ನಗುವನು)

ಕಾವೇರಿ – ಏನು ನಿಮಗೆ ಸುಳಿವೇ ಇಲ್ಲ ? ನಗುತ್ತೀರಿ, ಕುಶಲದಲ್ಲಿದ್ದೀರಿ !!

ರಂಗರಾಯ – ಆ ಕುಶಲವು ನನ್ನೊಬ್ಬನಿಗೇ ಇರುವದಿಲ್ಲ ಅದರಲ್ಲಿ ನಿನ್ನದೂ ಪಾಲು ಇರುತ್ತದೆ

ಕಾವೇರಿ – ಈಗ ಬಂದಿರುವ ದುಃಸ್ಥಿತಿಯ ಪಾಲೇ ಬೇಕಾದಷ್ಟಿದೆ, ನಿಮ್ಮ ಪುಣ್ಯದಿಂದ!

ರಂಗರಾಯ – ಸುಮ್ಮನೆ ಚಿಂತೆಮಾಡ ತ್ತ ಕುಳಿತರೆ ಏನಾಗುವದು?

ಕಾವೇರಿ – ಹೂಂ! ನಿಮ್ಮಂತೆ ಹುಚ್ಚುನಗೆ ನಗಬೇಕೇನು!

ರಂಗರಾಯ – ನನಗೂ ಚಿಂತೆಯು ಕತ್ತಲೆ ಮುಸುಕಿಕೊಂಡಿತ್ತು ಆಗ ನಾನು ಕೂಡಲೇ ಸೂರ್ಯನ ಬಳಿಗೆ ಹೋಗಿ ಕತ್ತಲೆಯನ್ನೋಡಿಸಿ ಬಿಟ್ಟೆ

ಕಾವೇರಿ - ಇಂಥ ದುಃಸ್ಥಿತಿಯಲ್ಲಿಯೂ ನೀವು ಕಾವ್ಯಮಯವಾಗಿ ಮಾತಾಡುವದನ್ನು ಕಂಡರೆ ಆಶ್ಚರ್ಯವೆನಿಸುತ್ತದೆ

ರಂಗರಾಯ – ಅದೆಲ್ಲಾ ಇರಲಿ ಬಿಡು ಆ ಶಂಕರಣ್ಣ ಇದ್ದಾನಲ್ಲಾ, ಅವನ ಬಳಿಗೆ ಹೋಗಿದ್ದೆ ಆತ ಎಲ್ಲಾ ಹೇಳಿಕೊಟ್ಟ

ಕಾವೇರಿ – ಆಂ! ಏನು? ನಮ್ಮ ದುಃಖ ಹಿಂಗುವ ಹಂಚಿಕೆ ಹೇಳಿ ಕೊಟ್ಟನೇ?

ರಂಗರಾಯ – ಹೌದು!

ಕಾವೇರಿ – ಆದರೆ ನಿಮ್ಮ ಕಾಳಗಳೊಂದು ನಿಮ್ಮ ಬೆನ್ನು ಬಿಡಬೇಕಲ್ಲಾ!

ರಂಗರಾಯ – ನೋಡಲ್ಲವೇ ಆ ನಿರ್ವಾಣಿ-ಮಾರುತಿಗಳು ರೆ ಮನೆಗೆ ಹೋದವರು ಅವರ ಕೃತ್ಯಗಳನ್ನು ಕಂಡರೆ, ವಿಚಾರಗಳನ್ನು ನೆನೆದರೆ ನನಗೀಗ ಸಿಟ್ಟು ಬರುತ್ತದೆ, ಕನಿಕರವೂ ಉಂಟಾಗುತ್ತದೆ ಅವರು ಹಾಲೆಂದು ಕುಡಿಯುವಷ್ಟರಲ್ಲಿ ಅವರಿಗೆ ವಿಷವೇ ಸಿಕ್ಕಂತಾಯ್ತು

ಕಾವೇರಿ – ಅಂಥಾ ಮಹಸ್ತೀಯರ ಪ್ರಸಾದದಿಂದಲೇ ನಮ್ಮ ಪತ್ತು ಹಾಳಾಗಿ ಹೋಯಿತು ಅಂಥವರ ಗೆಳೆತನ ಬೇಡವೆಂದರೆ ನೀವು ಕೇಳಲೇ ಇಲ್ಲ

ರಂಗರಾಯ – ಹೌದು, ವಿನಾಶ ಕಾಲದಲ್ಲಿಯ ಬುದ್ಧಿಯನ್ನು ಆಳೆದರೆ ನಮ್ಮದು ನಮಗೇ ನಾಚಿಕೆ ಬರುತ್ತದೆ

ಕಾವೇರಿ – ಹೌದು, ಅದೆಲ್ಲಾ ನೆನೆಸಿದರೆ ನನ್ನ ಎದೆಯು ಝಲ್ಲೆನ್ನುತ್ತದೆ ಮುಂದೇನು ಮಾಡುವುದು ?

ರಂಗರಾಯ – "ಏನು ಮಾಡುವುದು ?" ಶಂಕರಣ್ಣನಂತೆ ಭೂಮಿತಾಯಿಯ ಪೂಜೆ ಮಾಡುವುದು !!! ಇದು ಬಗೆಹರಿದೀತೇ ನಮಗೆ ?

ಕಾವೇರಿ – "ಬಗೆಹರಿದೀತೇನು ?" ನಿಮ್ಮದು ನೀವೇ ನೋಡಿರಿ ! ನಾನೇನು ಹೇಳಲಿ ?

ರಂಗರಾಯ – ನೀನು ಗಂಗಮ್ಮನಾದರೆ, ನಾನು ಶಂಕರಣ್ಣ ಆಗುವೆನು ಆದದ್ದಾಯ್ತು !

ಕಾವೇರಿ – ನನ್ನ ಹುಡ್ಗುಗಟ್ಟಬೇಡಿ ! ಗಂಗಮ್ಮನ ಆಚಾರವಿಚಾರಗಳೆಲ್ಲ ನನ್ನ ಮೈತುಂಬ ಹರಿದಾಡುತ್ತಿವೆ, ರೋಮರೋಮದಲ್ಲೆಲ್ಲ !

ರಂಗರಾಯ – ಕಾವೇರೀ, ನಿನ್ನ ಮಹತ್ವಾಕಾಂಕ್ಷೆಯ ಮಾತುಗಳನ್ನು ಕೇಳಿ ನನ್ನ ಮೈಯಲ್ಲಿಯ ರಕ್ತವು ಕುದಿದು ಹರಿಯಹತ್ತಿತು ನಿನ್ನಂಥ ಅರ್ಧಾಂಗಿಯ ಸಹಾಯವು ನನಗೆ ದೊರೆತರೆ, ಇನ್ನು ಹಾಹಾ ಅನ್ನುವಷ್ಟರಲ್ಲಿ ಎಷ್ಟೋ ಕಾರ್ಯಗಳನ್ನು ಮಾಡಿ ಚೆಲ್ಲುವೆನು ಕುರಿಹಿಂಡಿನೊಳಗಿನ ಸಿಂಹವು ಎಚ್ಚರವಾಗುವುದೇ ತಡ ! ನಾನು ಶಂಕರಣ್ಣನಂತೆ ಯೋಗ್ಯನಾದ ಮನುಷ್ಯನಾಗಿದ್ದರೆ ಈ ಊರವರೆಲ್ಲಾ ನನ್ನ ಬೆನ್ನು ಹತ್ತುತ್ತಿದ್ದರು ನಮ್ಮೂರು ಒಂದು ರಾಜ್ಯವೇ ಆಗುತ್ತಿತ್ತು ಸುಖದ ಸ್ವರ್ಗವೇ ಆಗುತ್ತಿತ್ತು !

ಕಾವೇರಿ – ಅವೆಲ್ಲಾ ಗುರಿಗಳನ್ನು ಇನ್ನಾದರೂ ಸಾಧಿಸಿರಿ ಮಹಾರಾಯರೇ !!! (ಇಷ್ಟರಲ್ಲಿ ಶಂಕರಣ್ಣ ಗಂಗಮ್ಮ ಬರುವರು)

ಶಂಕರಣ್ಣ+ಗಂಗಮ್ಮ – ಯಾಕೆ ದೇಸಾಯರೂ ದೇಸಾಯಿಣಿಯರೂ ಇಂದು ಹೊಸಾ ರಂಗಿನಲ್ಲಿದ್ದಂತೆ ಕಾಣುತ್ತದೆ

ರಂಗರಾಯ+ಕಾವೇರಿ – ಅದೆಲ್ಲಾ ನಿಮ್ಮದೇ ಪುಣ್ಯ ! ನಿಮ್ಮದೇ ಪುಣ್ಯ ! ಬನ್ನಿರಿ-ಬನ್ನಿರಿ (ಎಂದು ಕೈ ಕೈ ಹಿಡಿದು ಒಬ್ಬರನ್ನೊಬ್ಬರು ಆದರಿಸುವರು)



# ಕಾಯಕದ ಕಾಣಿ



## ೧ನೇ ದೃಶ್ಯ

[ ನುಲಿಯ ಚಂದಯ್ಯ ಶರಣನು ಹಗ್ಗ ಮಾಡುವುದಕ್ಕೆ ಹುಲ್ಲು ಕೊಯ್ಯುತ್ತ ಕೆಳಗೆ ಕಾಣಿಸಿದ ವಚನವನ್ನು ಮಣಮಣಿಸುತ್ತಿದ್ದಾನೆ ]

ಕಂದಿಸಿ ಬಂಧಿಸಿ ಕಂಡವರ ಬೇಡಿ ತಂದು ಜಂಗಮಕ್ಕೆ ಮಾಡಿಹೆನೆಂಬ
ದಂದುಗದ ಮಾಟಕ್ಕೆ ಲಿಂಗನೈವೇದ್ಯ ಸಲ್ಲದು ।
ತನು ಕರಗಿ ಮನ ಬಳಲಿ ಬಂದ ತೆರದ ಅನುವರಿದು ಸಂಶಯವಿಲ್ಲದೆ
ಜಂಗಮಲಿಂಗಕ್ಕೆ ದಾಸೋಹ ಮಾಡುವುದೇ ಮಾಟ ॥
ಕಾರೆಯ ಕಾಯಿಸೊಪ್ಪನಾದರೂ ಕಾಯಕದಿಂದ ಬಂದುದೆ ಲಿಂಗಾರ್ಪಿತವಲ್ಲದೆ
ದುರಾಸೆಯಿಂದ ಬಂದುದು ಅನರ್ಪಿತ ।
ಇದು ಕಾರಣ ಸತ್ಯಶುದ್ಧ ಕಾಯಕದ ನಿತ್ಯದ್ರವ್ಯವಾದರೆ
ಚಂದೇಶ್ವರ ಲಿಂಗಕ್ಕೆ ನೈವೇದ್ಯ ॥

ಅಲಲ! ಆಡಾಡುತ್ತ ಕೊಯ್ದರೂ ಅರ್ಧದಷ್ಟು ಕೆಲಸ ಮುಗಿದು ಬಿಟ್ಟಿತಲ್ಲ! ಈ ಹಳ್ಳದ ಜವುಳ ನೆಲದಲ್ಲಿ ಮೆದಿಯ ಹುಲ್ಲು ವಿಪುಲವಾಗಿ ಬೆಳೆದು ನಿಂತಿದೆ ಇನ್ನು ದಿನಾಲು ಇಲ್ಲಿಗೇ ಬರಬೇಕು (ಕಿವಿಗೊಟ್ಟು ಕೇಳಿ) ಏನೇನು ಲಿಂಗಪ್ಪಾ! ಕೊರಳೊಳಗೇ ಸುಳಿತು ಏನೇನೋ ಕೇಳುತ್ತಿರುವಿಯಲ್ಲ! ಏನು ಕೇಳುತ್ತೀ ಕೇಳು ಲಿಂಗಪೂಜೆಗಿಂತ ಜಂಗಮ ಸೇವೆ ಮಿಗಿಲು ಹೇಗೆ— ಎನ್ನುವೆಯಾ? ಲಿಂಗ ಜಡಾತ್ಮಕ, ಜಂಗಮ ಪ್ರಾಣಾತ್ಮಕ ಜಡಕ್ಕಿಂತ ಪ್ರಾಣದಲ್ಲಿ ದೇವನು ಹೆಚ್ಚಾಗಿ ಕಾಣಿಸಿಕೊಳ್ಳುವನು ಕಾಯಕಕ್ಕಿಂತ ಲಿಂಗಪೂಜೆ ಹಗುರು—ಎನ್ನುತ್ತೀಯಾ? ಅಹುದು! ಅಹುದು!! ಹಗುರು ಅಷ್ಟೇ ಏಕೆ? ಬಹಳೇ ಹಗುರು ಹಾಗೆಂತಲೇ ಅದಕ್ಕೆ ಫಲವೂ ಕಡಿಮೆ ಲಿಂಗವನ್ನೂ ಪೂಜಿಸು ಆಮೇಲ ಕಾಯಕ ಮಾಡಿ ಜಂಗಮವನ್ನೂ ಸೇವಿಸೆನ್ನುವಿಯಲ್ಲವೇ? ಬೇಡೆಂದರಾರು?

ಜಂಗಮವನ್ನು ಸೇವಿಸಿ ವೇಳೆ ಉಳಿದಾಗ ಅಲ್ಲವೆ, ಲಿಂಗವನ್ನು ಪೂಜಿಸುವುದು! ಏನೇನು? ಲಿಂಗಪೂಜೆಯ ಅರ್ಥವೇ ನನಗೆ ಗೊತ್ತಿಲ್ಲವೇ? ಗೊತ್ತಿಲ್ಲವೇಕೆ? ಸರಿಯಾಗಿ ಗೊತ್ತಿದೆ ಅದು ಗೊತ್ತಾಗಿದ್ದರಿಂದಲೇ ನಾನು ಸರಿಯಾದ ದಾರಿ ಹಿಡಿದಿದ್ದೇನೆ ತಿಳಕೊಂಡ ಅರ್ಥವೇನು ಹೇಳಿಬಿಡು ಅನ್ನುತ್ತೀ— ಅಹುದಲ್ಲವೇ? ಕೇಳು ಹಾಗಾದರ ಲಿಂಗಪೂಜೆಯಲ್ಲಿ ದೇವನನ್ನು ಕಲ್ಪಿಸಬೇಕಾಗುತ್ತದೆ ಜಂಗಮ ಸೇವೆಯಲ್ಲಿ ದೇವನ ಪ್ರಕಟನೆ ಸ್ಪಷ್ಟವಿರುತ್ತದೆ ಅಂತೆಯೇ ಕಾಲ್ಪನಿಕ ದೇವನ ಮುಂದಿನ ನಂದಾದೀಪಕ್ಕೆ ಸುಡುವ ಎಣ್ಣೆಯನ್ನು ಪ್ರಕಟ ದೇವನಾದ ಜಂಗಮದ ಹಸಿವೆಯ ಕಿಚ್ಚಿಗೆ ಹನಿಸಿದರೆ ಸಾರ್ಥಕವಲ್ಲವೇ? ಏನೆನ್ನುತ್ತೀ, ಸರಿಯಾಗಿ ಹೇಳು ನನ್ನದೊಂದು ದಾರಿಯೇ ಬೇರೆ? ಹಾಗೆ ಅಲ್ಲವಾದರ ಮತ್ತೆ ಹೇಗೆ? ಬಸವ ಅಲ್ಲಮಾದಿಗಳು ಹೀಗೆಯೇ ಮಾಡುವರೇನೆಂದು ನಿನ್ನ ಪ್ರಶ್ನೆಯೇ? ಕೇಳು—ಕೇಳು ಅವರೂ ಹೇಳಿದ್ದಾರೆ—ಕಾಯಕದಲ್ಲಿ ನಿರತನಾದರೆ ಗುರುದರ್ಶವಾದರೂ ಮರೆಯಬೇಕು, ಲಿಂಗಪೂಜೆಯಾದರೂ ತೊರೆಯಬೇಕು ಸಾಕು-ಸಾಕು? ಯಾಕೆ, ಇಷ್ಟು ಬೇಗ ಸಾಕಾಯಿತೇ? ಕಾಯಕವೇ ಕೈಲಾಸವೆನ್ನುವುದು ನಿನಗೆ ತಿಳಿದಿಲ್ಲವೇ? ತಿಳಿದಿದ್ದರೆ ಮತ್ತೇಕೆ ಕೇಳಿದೆ? ತಿಳಿದಿದೆಯಂತೆ! ಏನು ತಿಳಿಯಿತೋ? ಏನಂದೆ? ಸ್ಪಷ್ಟವಾಗಿ ಕೇಳಿಬಿಡು ನನಗೆ ಮಹತ್ವಕೊಡದಿದ್ದರೆ ಮತ್ತೇಕೆ ಕಟ್ಟಿಕೊಂಡರುವಿ?— ಇದೇ ಪ್ರಶ್ನೆಯಲ್ಲವೇ? ನಾನು ನಿನ್ನನ್ನು ಕಟ್ಟಿಕೊಂಡಿದ್ದು ಅದೂ ಸತ್ಯವೆನ್ನುವ ಕುರುಹಿಂಗಾಗಿ! ನಾನು ತಿಳಕೊಂಡ ಮಹತ್ವಕೊಟ್ಟಿರುವೆನಲ್ಲದೆ ನೀನು ತಿಳಕೊಂಡ ಮಹತ್ವ ಕೊಟ್ಟಿರಲಿಕ್ಕಿಲ್ಲ! ಮತ್ತೇನು ಪಿಸುಗುಡುತ್ತಿರುವಿ? ನೀನು ನೂರು ಪ್ರಶ್ನೆ ಕೇಳು ಆದರೆ ನನ್ನ ಕೆಲಸ ಕಟ್ಟಾಗುವಂತೆ ಪಿಸುಗುಡಬೇಡ ಹೇಳು, ತುಸು ಗಟ್ಟಿಸಿ ಹೇಳು ಕೊರಳ ಸೆಜ್ಜೆಯೊಳಗಿಂದ ನುಸುಳಬೇಕೆನ್ನುವಿಯಾ? ನಾನೇಕೆ ಒಪ್ಪಿಗೆ ಕೊಡಬೇಕು ಅದಕ್ಕೆ? ನಿನ್ನ ಇಷ್ಟಕ್ಕೆ ನಾನೇಕೆ ಅಡ್ಡಿಯಾಗಲಿ? ನೀರಲ್ಲಿ ಉರುಳಬೇಕೆನ್ನುವಿಯಾ? ಎಲ್ಲಿ ಉರುಳಿದರೂ ನಾನು ತಡೆಯುವುದಿಲ್ಲ ನೆಲದ ಮೇಲೆ ಉರುಳು, ನೀರಲ್ಲಿ ಮುಳುಗು! ನನ್ನ ಕೈಯೊಳಗಿನ ಕುಡುಗೋಲು ಬಿಟ್ಟು ನಿನ್ನನ್ನು ಮುಟ್ಟುವುದಿಲ್ಲ ನಾನು ಕಾಯಕದಲ್ಲಿ ತೊಡಗಿ

ದ್ದರೆ ಮಡಿಯಿಂದ ಇದ್ದ ಹಾಗೆ! ಮಡಿಯಿಂದ ಇದ್ದಾಗ ನಾನು ಇನ್ನಾರನ್ನೂ ಮುಟ್ಟುವದಿಲ್ಲ! (ಕೊರಳಸೆಜ್ಜೆಯೊಳಗಿಂದ ಲಿಂಗವು ಜಾರಿ ನೀರಲ್ಲಿ ಮುಳುಗುವದು) ಲಿಂಗಪ್ಪಾ! ನುಸುಳಿಯೇ ಬಿಟ್ಟೆಯಾ? ನಿನ್ನ ಇಷ್ಟ! ನನಗೂ ಹಗುರು ಆಯಿತು ನಾಲ್ಕು ಸಿವುಡು ಹೆಚ್ಚು ಹುಲ್ಲು ಹೊತ್ತುಕೊಳ್ಳುತ್ತೇನೆ ಇಂದು!

ಭಾವಶುದ್ಧವಾಗಿಪ್ಪುದೇ ಗುರುಪೂಜೆ, ಜ್ಞಾನಶುದ್ಧವಾಗಿಪ್ಪುದೇ ಲಿಂಗಪೂಜೆ, ತ್ರಿಕರಣಶುದ್ಧವಾಗಿಪ್ಪುದೇ ಜಂಗಮಪೂಜೆ

ಈ ತ್ರಿವಿದ ಭೇಧದಲ್ಲಿ ತ್ರಿವಿಧಾರ್ಪಣವ ಸಮರ್ಪಿಸಿ ನಿಂದುದೇ ಚಂದೇಶ್ವರ ಲಿಂಗಕ್ಕೆ ಅರ್ಪಿತ

(ಮೆದೆಹುಲ್ಲಿನ ಹೊರೆಬಿಗಿದು ಹೊತ್ತುಕೊಂಡು ಮನೆಯ ಕಡೆಗೆ ಹೊರಡುವನು)

—"ನಾನೂ ನಿನ್ನ ಕೂಡ ಬರುತ್ತೇನೆ!"

ಯಾರವರು ಹೀಗೆ ಕೂಗುವವರು? (ಹೊರಳಿ ನೋಡಿ) ಲಿಂಗಪ್ಪಾ! ಅಹ್ಹಹ್ಹಾ! ಬರುವುದಾದರೆ ಬರಬಹುದು ಒಲ್ಲವಾದರೆ ಬಿಡಬಹುದು ತೋಳು ಚಾಚಿ ಏನು ಕೇಳುತ್ತಿ? ಎತ್ತಿಕೊಳ್ಳಬೇಕೇ? ಯಾರನ್ನು? ನಿನ್ನನ್ನೆತ್ತಿಕೊಂಡು ಏನು ಮಾಡಲಿ? ನನಗೆ ಜಂಗಮಸೇವೆ ಮುಖ್ಯ! (ಮುಂದೆ ಸಾಗುವನು)

—"ಬಂದೇ ಬಿಟ್ಟೆ ನಿಲ್ಲು!"

ಹೇಗೆ ಬರುತ್ತೀ ಬಾರಪಾ! ನನಗೆ ಹೊತ್ತಾಗುತ್ತದೆ ಕಾಲಸಪ್ಪುಳ ವೇನಿದು? (ಹೊರಳಿ ನೋಡಿ) ಅಲಲಾ! ಲಿಂಗಪ್ಪನು ಮನುಷ್ಯನೇ ಆಗಿ ಬಿಟ್ಟನಲ್ಲಾ! ಲಿಂಗ ಹೋಗಿ ಜಂಗಮನಾದಿ! ಇನ್ನು ನಿನ್ನನ್ನು ಹತ್ತುಸಾರ ಸೇವಿಸುತ್ತೇನೆ ಆಯಿತೇ? (ಸಾಗುವನು)

**ಲಿಂಗಪುರುಷ** – (ಕಾಣಿಸಿಕೊಂಡು) ಚಂದಯ್ಯ, ನಾನೂ ಬಂದೆ ಬಿಟ್ಟು ಹೋಗಬೇಡ

**ಚಂದಯ್ಯ** .– ಬಿಟ್ಟು ಹೋಗುವವ ನೀನು, ನಾನಲ್ಲ

**ಲಿಂಗಪುರುಷ** – ತಿಳಿಯದೆ ಬಿಟ್ಟು ಹೋದೆ ನೀನು ನನ್ನನ್ನು ಸಂಗಡ ಕರಕೊಂಡು ಹೋಗು

ಚಂದಯ್ಯ – ನಾನೇನೂ ಕರಕೊಂಡು ಹೋಗುವದಿಲ್ಲ !

ಲಿಂಗಪುರುಷ – ಕರಕೊಂಡು ಹೋಗುವದಿಲ್ಲವಾದರೆ ನಾನೇ ಬೆನ್ನು ಹತ್ತಿ ಬರುತ್ತೇನೆ

ಚಂದಯ್ಯ – ಬೆನ್ನು ಹತ್ತಿ ಬರಲಿಕ್ಕೆ ನನ್ನ ಅಪ್ಪಣೆ ಏತಕ್ಕೆ ಬೇಕು?

ಲಿಂಗಪುರುಷ – ನಿನ್ನ ಮನಸ್ಸು ನೋಡುವುದಕ್ಕಾಗಿ ನಾನು ನುಸುಳಿದರೆ ನೀನು ಮುನಿಯಬೇಕೇ ?

ಚಂದಯ್ಯ – ನುಸುಳಿದಾಗ ನಾನು ಮುನಿದೆನೇ ?

ಲಿಂಗಪುರುಷ – ಇಲ್ಲ ಆದರೆ ಈಗೇಕೆ ಬೇಡವೆನ್ನುವೆ ?

ಚಂದಯ್ಯ – ನೀನು ಹೋದಾಗ ನಾನು ಹೋಗು ಎಂದಿದ್ದೆನೇ ?

ಲಿಂಗಪುರುಷ – ಕೇಳದೆ ಹೋಗಿದ್ದು ಒಂದು ತಪ್ಪು

ಚಂದಯ್ಯ – ಬೇಡವೆಂದರೂ ಬರುವುದು ಇನ್ನೊಂದು ತಪ್ಪು

ಲಿಂಗಪುರುಷ – ಅಹುದು ಎರಡೂ ತಪ್ಪು ನನ್ನವೇ ಇನ್ನಾದರೂ ನನ್ನನ್ನು ಕರಕೊಂಡು ನಡೆ

ಚಂದಯ್ಯ .– ಅದಾಗದು

ಲಿಂಗಪುರುಷ – ಅಗೋ ಅಲ್ಲಿ ಮಾಚಿದೇವನು ಬಟ್ಟೆಗಳನ್ನು ಒಗಯುತ್ತಿದ್ದಾನೆ ಅವನ ಬಳಿಗೆ ಹೋಗುವಾ ಬಾ ಚಂದಯ್ಯ

ಚಂದಯ್ಯ – ಚಂದಯ್ಯನು ಬಾಯಿಬೋನ ಕೊಟ್ಟರೆ ಮಾಚಯ್ಯನು ಬೆನ್ನ ಕಡಬು ಕೊಟ್ಟಾನು ಕಾಯಕದಲ್ಲಿ ನಿರತನಾದ ಶರಣನನ್ನು ಕಣಕುವರೇ ?

ಲಿಂಗಪುರುಷ – ನಾನು ಅದಕ್ಕೂ ಸಿದ್ಧನಿದ್ದೇನೆ

ಚಂದಯ್ಯ – ನೀನು ಸಿದ್ಧನಿದ್ದರೆ ಪ್ರಸಾದ ತಕ್ಕೊಂಡು ಬಾ ನಾನು ಹಾಗಯೇ ಸಾಗುತ್ತೇನೆ

ಮಾಚಯ್ಯ – ಶರಣು ! ಶರಣು !! ಚಂದಯ್ಯ ಶರಣರೇ ! ನಿಮ್ಮಿಬ್ಬರಿಗೂ ಶರಣು !

ಚಂದಯ್ಯ – ಮಾಚಿದೇವರಿಗೆ ಶರಣು ಶರಣಾರ್ಥಿ !

ಮಾಚಯ್ಯ – (ಮನದಲ್ಲಿ) ಚಂದ್ರಯ್ಯನೊಡನೆ ಇದ್ದವನು ಲಿಂಗ ದೇವನೆಂದು ತೋರುತ್ತದೆ (ಪ್ರಕಟವಾಗಿ) ನಿಮ್ಮಿಬ್ಬರಲ್ಲಿ ಏನೋ ತೊಡಕುಂಟಾದಂತೆ ಕಾಣುತ್ತದೆ!

ಚಂದಯ್ಯ – ಆಗಿದೆ ತಾಯಿಮಕ್ಕಳ ಜಗಳ ನ್ಯಾಯಮಾಡುವರಾರು?

ಮಾಚಯ್ಯ – ಏನದು?

ಲಿಂಗಪುರುಷ – ನಾನು ಚಂದಯ್ಯನ ಕೊರಳನೆಜ್ಜೆಯಿಂದ ಹೊರಗೆ ಬಿದ್ದುದು ನನ್ನ ತಪ್ಪಾಗಿದೆ

ಮಾಚಯ್ಯ – ಮುಂದೇನೆನ್ನುತ್ತೀ?

ಲಿಂಗಪುರುಷ – ಅಷ್ಟು ತಪ್ಪಿಗೆ ಚಂದಯ್ಯನು ನನ್ನನ್ನು ಬಿಟ್ಟು ಕೊಟ್ಟು ಹೋಗಬೇಕೆ?

ಮಾಚಯ್ಯ – ಹೋಗಬಾರದು

ಲಿಂಗಪುರುಷ – ಅಹುದಲ್ಲವೇ ಮಾಚಿದೇವ? ಹೇಳು ಒಂದಿಷ್ಟು ಈ ಚಂದಯ್ಯನಿಗೆ

ಮಾಚಯ್ಯ – ಹೇಳುವುದೇನು? ಯಾಕೆ ಚಂದಯ್ಯಾ–ಏನೆನ್ನುತ್ತೀ?

ಚಂದಯ್ಯ – ನೀವೇನೆನ್ನುವಿರಿ?

ಮಾಚಯ್ಯ – ನಿನ್ನ ಇಷ್ಟಲಿಂಗವು ನಿನ್ನ ಬೆನ್ನುಹತ್ತಿ ಬಂದರೆ ನೀನು ಹೀಗ ಬಿಟ್ಟು ಹೋಗಬೇಕೇ?

ಚಂದಯ್ಯ – ಯಾಕೆ ಬಿಟ್ಟು ಹೋಗಬಾರದು?

ಮಾಚಯ್ಯ – ಇದು ಶಿವಶರಣರ ನಡ ಆಗಲಾರದು

ಚಂದಯ್ಯ – ಅದು ಹೇಗ?

ಮಾಚಯ್ಯ – ಲಿಂಗವು ಸೆಜ್ಜೆಯಲ್ಲಿದ್ದಿತೇ?

ಚಂದಯ್ಯ – ಅಹುದು ಸಜ್ಜೆಯಲ್ಲಿಯೂ ಇದ್ದಿತು

ಮಾಚಯ್ಯ – ಸೆಜ್ಜೆಯಿಂದ ಹೊರಗೆ ನುಸುಳಿತೇ?

ಚಂದಯ್ಯ – ಹೊರಗೂ ನುಸುಳಿತು

ಮಾಚಯ್ಯ – ಅಂದರೆ?

ಚಂದಯ್ಯ – ಅಂದರ ಅದು ಹೊರಗೆ ಇದ್ದಂತೆ ಒಳಗೂ ಇತ್ತು–ಎಂದರ್ಥ

ಮಾಚಯ್ಯ – ಒಳಗೂ ಇದ್ದರೆ ಹೊರಗೆ ನುಸುಳಿದ್ದು ಸುಳ್ಳೇ ?

ಚಂದಯ್ಯ – ಸುಳ್ಳು ! ಶುದ್ಧ ಸುಳ್ಳು !!

ಮಾಚಯ್ಯ – ಹೊರಗೆ ನುಸುಳಿದ್ದು ಸುಳ್ಳಾದರೆ ಲಿಂಗವು ತಪ್ಪು ಮಾಡಿದ್ದೂ ಸುಳ್ಳು

ಚಂದಯ್ಯ - ಲಿಂಗವು ನುಸುಳಿದ್ದು ಸುಳ್ಳು ಅದು ಮೊದಲು ಸೆಜ್ಜೆಯಲ್ಲಿರುವಂತೆ ಹೊರಗೂ ಅದೆ

ಮಾಚಯ್ಯ – ಅದಕ್ಕಿಂತಲೇ ಲಿಂಗವನ್ನು ಮನ್ನಿಸಿ ಕರಕೊಂಡು ಹೋಗು—ಎನ್ನುವುದು

ಚಂದಯ್ಯ – ಅದಕ್ಕಿಂತಲೇ ಜಂಗಮವನ್ನು ಸೇವಿಸುವುದು ಹೆಚ್ಚು ಉಚಿತ—ಎನ್ನುವುದು

ಮಾಚಯ್ಯ – ಚಂದಯ್ಯಾ, ಗುರುವಿಗೂ ಲಿಂಗವಿದೆ, ಜಂಗಮಕ್ಕೂ ಲಿಂಗವಿದೆ ನಿನಗಷ್ಟೇ ಏಕೆ ಬೇಡ ಲಿಂಗ ?

ಚಂದಯ್ಯ – ಯಾರು ಬೇಡವೆಂದರು ? ಜಂಗಮದೊಳಗೆ ಲಿಂಗವಿಲ್ಲವೇ ?

ಮಾಚಯ್ಯ – ಅದೆ ಆದರೆ ಅದು ಹಿಂದುಗಡೆ

ಚಂದಯ್ಯ .– ಜಂಗಮದಲ್ಲಿದ್ದುದು ಸಚೇತನ ಲಿಂಗ ಆದನ್ನೊಲಿಸಿಕೊಳ್ಳುವುದು ಸುಲಭ

ಮಾಚಯ್ಯ – ಲಿಂಗದಲ್ಲಿದ್ದ ದೇವನನ್ನು ಸುಲಭವಾಗಿ ಒಲಿಸಿಕೊಳ್ಳಬಹುದು ಆದರೆ ಈಗ ಹೊತ್ತು ತಲೆಯ ಮೇಲೆ ಬಂದಿದೆ ಹೊರೆಹೊತ್ತು ನಿಂತಿರುವಿ ಇಂಥ ಹೊತ್ತಿನಲ್ಲಿ ನಾವು ತೀರ್ಮಾನಕ್ಕೆ ಬರುವುದು ಸುಲಭವಲ್ಲ ಬಸವಾದಿ ಪ್ರಮಥರು ಶಿವಾನುಭವ ಮಂಟಪದಲ್ಲಿದ್ದಾಗ ಅಲ್ಲಿಗ ಮೂವರೂ ಹೋಗುವಾ

ಚಂದಯ್ಯ – ಛೇ ! ಛೇ ! ಛೇ !! ನನ್ನ ಜಂಗಮಸೇವೆಯ ವೇಳೆಯಾಯಿತು ಅದು ಮುಗಿದ ಬಳಿಕ ಅವಶ್ಯವಾಗಿ ಶಿವಾನುಭವ ಮಂಟಪಕ್ಕೆ ಬರುವೆನು ನೀವೂ ಅಲ್ಲಿಗೆ ಬನ್ನಿರಿ

ಮಾಚಯ್ಯ – ಆಗಲಿ

ಲಿಂಗಪುರುಷ – ಚಂದಯ್ಯ, ನಿನ್ನ ಜಂಗಮಾರ್ಚನೆಯಲ್ಲಿ ನಾನು ನಿನಗೆ ನೆರವಾಗುವೆನು ಸಂಗಡ ಬರಲು ಅಪ್ಪಣೆ ಕೊಡು

ಚಂದಯ್ಯ – ನೀನು ಬರುವುದಾದರೆ ನನ್ನ ಕಾಯಕ ಮಾಡಬೇಕು!

ಲಿಂಗಪುರುಷ – ಅವಶ್ಯವಾಗಿ ಮಾಡುವೆನು

ಚಂದಯ್ಯ – ಹಾಗಾದರೆ ಈ ಮದಿಯ ಹುಲ್ಲು ಹೊತ್ತುಕೋ!

ಲಿಂಗಪುರುಷ – ಆಗಲಿ ಹೊರಿಸು

ಚಂದಯ್ಯ – ಇಷ್ಟೇ ಅಲ್ಲ ಮನೆಗ ಹೋದ ಬಳಿಕ ನುಲಿಯನ್ನು ಹೊಸೆಯಬೇಕು

ಲಿಂಗಪುರುಷ – ಹುಂ!

ಚಂದಯ್ಯ – ಆಮೇಲೆ ಕಣ್ಣಿಮಾಡಿ ಮಾರಿಕೊಂಡು ಬರಬೇಕು!

ಲಿಂಗಪುರುಷ – ಆಗಲಿ

ಚಂದಯ್ಯ – ಬಂದ ಹಣದಿಂದ ನೀನು ಜಂಗಮದಾಸೋಹದಲ್ಲಿ ನೆರವಾಗಬೇಕು!

ಲಿಂಗಪುರುಷ – ಹಾಗೆಯೇ ಮಾಡುವೆನು

ಚಂದಯ್ಯ – ಇಷ್ಟಕ್ಕೆಲ್ಲ ಒಪ್ಪಿಗೆಯೇ?

ಲಿಂಗಪುರುಷ – ಒಪ್ಪಿಗೆ

ಚಂದಯ್ಯ – ನಡೆ, ಹಾಗಾದರೆ ನಮಸ್ಕಾರ ಮಾಚಿದೇವರೇ! ಹೊತ್ತಾಗುವದು! (ಹೊರೆ ಹೊರಿಸುವನು)

ಲಿಂಗಪುರುಷ – ನಮಸ್ಕಾರ ಮಾಚಿದೇವರೇ! (ಮನ) ಸೆಜ್ಜೆಯೊಳಗಿಂದ ಹೊರಬಿದ್ದ ಬಳಿಕ ಈ ಕಾಯಕದ ಬೆಲೆ ಗೊತ್ತಾಗತೊಡಗಿದೆ ಆದರೊಂದಿಗೆ ಈ ನುಲಿಯ ಕಾಯಕದ ಚಂದಯ್ಯನ ನೆಲೆಯೂ ಗೊತ್ತಾಗತೊಡಗಿದೆ! (ಚಂದಯ್ಯ ಲಿಂಗಪುರುಷ ಹೋಗುವರು)

ಮಾಚಯ್ಯ – ಈ ನುಲಿಯ ಚಂದಯ್ಯ ಮಹಾಶರಣ! ಸ್ವತಂತ್ರ ವಿಚಾರಿ! ತನ್ನ ಅನುಭವಕ್ಕೆ ಬಂದುದನ್ನೇ ನುಡಿಯುವವ! ಅದರಂತೆಯೇ ನಡೆಯುವವ! ಆದರೆ ಹಠವಾದಿಯಲ್ಲ ಅಗಾ, ಅವನ ಇಷ್ಟಲಿಂಗವು ಸೆಜ್ಜೆಯೊಳಗಿಂದ ಹೊರಬಿದ್ದ ತಪ್ಪು ಮಾಡಿ ಹೊರೆ ಹೊತ್ತುಕೊಂಡು

ಏದುತ್ತ ಸಾಗಿದೆ ಭಕ್ತನಿಂದ ಪೂಜಿಸಿಕೊಳ್ಳುವ ದೇವನು ಈಗ ಆತನ ಆಳಾಗಿ ತೊತ್ತುಗೆಲಸಕ್ಕೆ ಬೆನ್ನುಕೊಟ್ಟಿದ್ದಾನೆ ಈ ದೇವಭಕ್ತರ ನ್ಯಾಯ ವನ್ನು ಯಾರು ತೀರಿಸಬೇಕು? ತಾನೇ ತೀರಿಸಿಕೊಳ್ಳಬೇಕಲ್ಲವೇ?

## ೨ನೇ ದೃಶ್ಯ

[ಲಿಂಗಪುರುಷನು ಕಣ್ಣಿಗಳನ್ನು ಹೊತ್ತುಕೊಂಡು ಪೇಟೆಯಲ್ಲಿ ಸುತ್ತುತ್ತ ಬರುತ್ತಾನ ]

**ಲಿಂಗಪುರುಷ** – ಲಿಂಗದೇವನಾಗಿ ಭಕ್ತನ ಕೊರಳ ಸೆಜ್ಜೆಯಲ್ಲಿ ಇರುವು ದನ್ನು ಬಿಟ್ಟು ನಾನೇಕೆ ಕೆಳಗುರುಳಿದೆನೋ—ಎನ್ನುವಂತಾಗಿದೆ ನುಲಿಯ ಚಂದಯ್ಯನನ್ನು ಪರೀಕ್ಷಿಸುವಷ್ಟರಲ್ಲಿ, ನನ್ನನ್ನೇ ಆತನು ಚೆನ್ನಾಗಿ ಪರೀಕ್ಷಿಸ ತೊಡಗಿದ್ದಾನೆ ಮನುಷ್ಯರೂಪ ಧಾರಣ ಮಾಡಿದಂದಿನಿಂದ ನಾನು ಪಡುವ ಕಷ್ಟವು ಅಷ್ಟಿಷ್ಟಲ್ಲ ಹುಲ್ಲುಹೊರೆ ಹೊತ್ತು ಗೋಣು ನೋಯಿಸಿ ಕೊಂಡಿದ್ದು ಒಂದು ಪಟ್ಟಾದರೆ, ಹುಲ್ಲಿನಿಂದ ಹಗ್ಗಹೊಸೆದು ಅಂಗೈಗೆ ಗುಳ್ಳೆಬಂದುದು ಹತ್ತು ಪಟ್ಟಾಯಿತು ಹಗ್ಗದಿಂದ ಕಣ್ಣಿ ಮಾಡಿಕೊಂಡು ಪೇಟೆಯಲ್ಲಿ ಮಾರಾಟಕ್ಕಾಗಿ ಅಲೆಯುವುದು ನೂರು ಪಟ್ಟಾಯಿತು ಅಗೋ, ಸೂರ್ಯನು ನೆತ್ತಿಯ ಮೇಲ ಬಂದನು ನನ್ನೊಡೆಯನ ಜಂಗಮದಾಸೋಹಕ್ಕೆ ತಡಯಾದರೆ ನನ್ನ ಗತಿ ಎಲ್ಲಿಗೆ ಮುಟ್ಟುವುದೋ ಎಂಬ ಡವಡವಿಕ ಸಾವಿರ ಪಟ್ಟಾಯಿತು ಗೊತ್ತು ಮಾಡಿದ ಹೊತ್ತಿ ನೊಳಗಾಗಿ ನಮ್ಮ ಕಣ್ಣಿ ಮಾರಾಟವಾಗುವಂತೆ ತೋರುವದಿಲ್ಲ ಆ ಮೇಲಿನ ಪೇಟೆಯಲ್ಲಿ ಕಣ್ಣಿ ಕುಡುಪಾಗಿವೆಯೆಂದು ಒಬ್ಬನೆಂದರೆ, ದಿನಾಲು ಕಣ್ಣಿ ಯಾತಕ್ಕೆ ಬೇಕೆಂದು ಇನ್ನೊಬ್ಬನು ಮೋರೆ ತಿರುವಿದನು! ಆ ದೊಡ್ಡ ಮನೆಯ ಶೆಟ್ಟರು ಗಟ್ಟಿಜೀವ ಮಾಡಿ ಕಾಲಾಣೆಗೊಂದರಂತೆ ಬೇಡಿದರು! ಅಲ್ಲಿ ಉಪ್ಪಿನಂಗಡಿಯ ಯಜಮಾನರು ಮೂರು ಬಿಲ್ಲಿಗೆ ಎರಡರಂತೆ ಬೇಡಿ ದರೂ ರೊಕ್ಕ ನಾಳೆಗೆ ಕೊಡುವೆನೆಂದರು ಇನ್ನೊಬ್ಬರು ಹಿರಿಯರಿಲ್ಲ ವೆಂದರು! ಮತ್ತೊಬ್ಬರು ನುಲಿಯ ಚಂದಯ್ಯನಲ್ಲಿಯೂ ಕಣ್ಣಿಗಳನ್ನು ಕದ್ದಿರಬಹುದೆಂಬ ಸಂಶಯದಿಂದ ಚಾವಡಿಗೆ ನಡೆಯೆಂದರು!. ಅಯ್ಯೋ! ಮನುಷ್ಯ ಜನ್ಮವೇ! ಒಪ್ಪೊತ್ತಿನ ಅನುಭವವೇ ಇಷ್ಟು ಕಹಿಯೆಂದರೆ ನೂರು

ವರ್ಷದ ಆಯುಷ್ಯವನ್ನು ಈ ಜನರು ಹೇಗೆ ಕಳೆಯುತ್ತಿರಬೇಕಪ್ಪಾ! ಸಂಗನಿಗೆ ವರ ಶರಣರಿಗೆ ವಧುವಾಗಬೇಕಾಗುತ್ತದೆಂದು ಬಸವಣ್ಣನವರು ನುಡಿದ ಮಾತು ಈ ಒಂದೇ ದಿನದಲ್ಲಿ ನನ್ನ ಅನುಭವಕ್ಕೆ ಬಂದಿತು ಈಗೇನು ಮಾಡುವದು? ನೇರವಾಗಿ ಬಸವಣ್ಣನವರ ಕಡಗೆ ಹೋಗುವದು! ಬಂದ ಸಂಕಟವನ್ನು ಹೊಟ್ಟೆ ಬಿಚ್ಚಿ ಆತನ ಮುಂದೆ ತೋಡಿಕೊಳ್ಳುವದು! ಆ ಪುಣ್ಯಾತ್ಮನೇ ಏನಾದರೂ ದಯ ಮಾಡಿದರೆ ನನ್ನ ಕೆಲಸ ಕೈಗೂಡುತ್ತದೆ! ಚಂದಯ್ಯನ ಕೊರಳ ನಜ್ಜೆಯಿಂದ ಉರುಳಿಬಿದ್ದ ಸೊಕ್ಕಿಗೆ ತಕ್ಕ ಫಲ ಸಿಕ್ಕಿತು ಇನ್ನು ಈ ಕೆಲಸದಲ್ಲಿಷ್ಟು ಅಸವಿಸಿಯಾದರೆ ನನ್ನ ಗತಿ ತೀರಿಯೇ ಹೋಯಿತು! ಪರಮಾತ್ಮಾ! ನಿನ್ನ ಕೃಪೆಯಿರಲಿ (ಎಂದು ಅವಸರದಿಂದ ಹೊರಟುಹೋಗುವನು)

## ೩ನೇ ದೃಶ್ಯ

(ಚಂದಯ್ಯನು ಲಿಂಗಪುರುಷನ ದಾರಿ ಕಾಯುತ್ತ ತನ್ನ ಮನೆಯಲ್ಲಿ ಕುಳಿತಿರುವನು)

ನೇಮದ ಕೂಲಿ। ಅಂದಿನ ನೇಮಕೆ
ಸಂದಿರಬೇಕು॥ ಕಾಯಕ ಧರ್ಮ॥
ಸತ್ಯವು ಶುದ್ಧವು। ಕಾಯಕವಿದ್ದರೆ
ಚಿತ್ತಚಂಚಲ। ನೆರೆಯುಡಗುವದು॥

ಚಂದಯ್ಯ – ಏನದು? ಕಲ್ಲು ಕವಣಿ ಅತ್ತಲೇ ಹೋದಂತಾಯಿತಲ್ಲ! ಕಣ್ಣಿಯೂ ಹೋದವು! ಲಿಂಗಪುರುಷನೂ ಹೋದನು! ಹೊತ್ತು ತಲೆಯ ಮೇಲೆ ಬಂದಿತು! ಕಾಯಕದ ಕಠೋರತೆಯನ್ನು ಸಹಿಸುವದಕ್ಕೆ ರೂಢಿ ಬೇಕು ಕಂಣಿಗಳು ಕೈಬಿಟ್ಟು ಹೋದವೋ ಇಲ್ಲವೋ? ಅಗೋ ಚಿಟಿಕೆ ತಾಳದಲ್ಲಿ ಹೆಜ್ಜೆ ಹಾಕುತ್ತ ಲಿಂಗಪುರುಷನು ಇತ್ತಲೇ ಬರುವಂತಿದೆ! ಕೈಯಲ್ಲಿ ಕಣ್ಣಿಗಳಿಲ್ಲ! ಮಾರಿವೆ! ಬಹಳ ಒಳ್ಳೆಯದಾಯಿತು

ಲಿಂಗಪುರುಷ – ಹೊನ್ನ ನಾಣ್ಯ! ಹೊಸ ನಾಣ್ಯ! ಹೊನ್ನ ನಾಣ್ಯ! ಸಾವಿರ।
ಚಿನ್ನ ದೊಡೆಯ! ಇನ್ನು ತಡವೆ–ಎಣಿಸಿಕೊಳ್ಳಿ ಸಾವಿರ॥

ಒಡೆಯಾ! ಈ ಹಣವನ್ನು ಎಣಿಸಿಕೊಳ್ಳಿರಿ!

ಚಂದಯ್ಯ – ಇದೆಲ್ಲಿಯ ಹಣ?

ಲಿಂಗಪುರುಷ – ಕಣ್ಣಿ ಮಾರಿ ಬಂದದ್ದು

ಚಂದಯ್ಯ – ಇಷ್ಟೆಲ್ಲಿಂದ ಬರಬೇಕು ?

ಲಿಂಗಪುರುಷ – ಇಷ್ಟೆಲ್ಲವೂ ಕಣ್ಣಿಯ ಬೆಲೆಯೇ

ಚಂದಯ್ಯ – ಕಣ್ಣಿಯ ಬೆಲೆ ಇಷ್ಟೊಂದು ಹೇಗೆ ಬಂದಿತು ?

ಲಿಂಗಪುರುಷ – ಹಾಗೆಂದರೆ ?

ಚಂದಯ್ಯ – ಹಾಗೆಂದರೆ ಇದು ಕಳುವಿನ ಹಣ !

ಲಿಂಗಪುರುಷ – ತುಟ್ಟಿಯ ಬೆಲೆಯಿಂದ ಮಾರಾಟವಾಗಿದ್ದರೆ ?

ಚಂದಯ್ಯ – ಅದಂತೂ ಶುದ್ಧ ಕಳವು ! ರಾಜದುಡುಗು !

ಲಿಂಗಪುರುಷ – ಪೇಟೆಯ ಧಾರಣಿ ಹೆಚ್ಚಿದೆ ಒಡೆಯಾ

ಚಂದಯ್ಯ – ಅಂದರೆ ?

ಲಿಂಗಪುರುಷ – ಗಿರಾಕಿಗಳು ಹೆಚ್ಚಾಗಿದ್ದರಿಂದ ಬೆಲೆ ಹೆಚ್ಚಿಗೆ ಬಂದಿತು!

ಚಂದಯ್ಯ – ಛೀ ! ಛೀ !! ವಾಸ್ತವಿಕ ಬೆಲೆಗಿಂತ ಹೆಚ್ಚಿಗ ತಗೆದು ಕೊಂಡರೆ ಅದು ಕಳವು, ತುಡುಗು, ಅಷ್ಟೇ ಅಲ್ಲ, ಸುಲಿಗೆ ಸಹ ಎನಿಸುತ್ತದೆ ಅದು ನಮ್ಮ ಚಂದೇಶ್ವರ ಲಿಂಗಕ್ಕೆ ಸಲ್ಲದು ನೋಡಾ ಲಿಂಗಪುರುಷಾ !

ಲಿಂಗಪುರುಷ – ಈ ಹಣವನ್ನೆಲ್ಲ ನೀವು ಜಂಗಮ ಸೇವೆಯಲ್ಲಿಯೇ ಖರ್ಚು ಮಾಡಿ ಬಿಡುವಿರಲ್ಲವೇ ?

ಚಂದಯ್ಯ – ಅಹುದು, ಹಾಗಿದ್ದರೂ ಸಲ್ಲದು !

" ನೇಮದ ಕೂಲಿಯ ಬಿಟ್ಟು | ಹೇಮದಾಸೆಗೆ ಕಾಮಿಸಿ|
ದ್ರವ್ಯವ ಹಿಡಿದರೆ | ತಾ ಮಾಡುವ ಸೇವೆ ನಷ್ಟವಯ್ಯಾ||
ನನಗೆ ಜಂಗಮ ಪ್ರಸಾದದಾಗು| ಚಂದೇಶ್ವರ ಲಿಂಗಕ್ಕೆ
ಪ್ರಾಣವಯ್ಯ ||

ಲಿಂಗಪುರುಷ – ಹಾಗಾದರೆ ಈಗೇನು ಮಾಡುವದು ?

ಚಂದಯ್ಯ – ಇದನ್ನಾರು ಕೊಟ್ಟರು ?

ಲಿಂಗಪುರುಷ – (ಮನದಲ್ಲಿ) ಬಸವಣ್ಣನವರ ಹೆಸರು ಹೇಳಿ ಅವರನ್ನೂ ಬಯ್ಯಿಸುವದು ಸರಿಯಲ್ಲ (ಪ್ರಕಟ) ಇದನ್ನು ಗಿರಾಕಿಗಳು ಕೊಟ್ಟರು

ಚಂದಯ್ಯ – ಗಿರಾಕಿಗಳು ಕೊಟ್ಟಿದ್ದರೆ ಸಾವಿರ ಹೊನ್ನುಗಳನ್ನೆಲ್ಲ

ಅವರವರಿಗೆ ತಿರುಗಿ ಕೊಟ್ಟು, ಕಣ್ಣಿಯ ವಾಸ್ತವಿಕ ಬೆಲೆ ಮಾತ್ರ ತೆಗೆದು ಕೊಂಡು ಬರಬೇಕು

ಲಿಂಗಪುರುಷ – ವಾಸ್ತವಿಕ ಬೆಲೆಯೆಂದರೆ?

ಚಂದಯ್ಯ – ಒಂದು ಕಣ್ಣಿಗೆ ಅರ್ಧ ಆಣೆ, ಅಷ್ಟು ಹಾಗ ಮಾತ್ರ ನಮಗೆ ಸಂದರಾಯಿತು!

ಲಿಂಗಪುರುಷ – (ಹೊರಟು) ಅಯ್ಯೋ! ಮಹಾರಾಯಾ! ಏನು ನಿನ್ನ ಕಾಯಕದ ಕಟ್ಟು! ಈ ಶರಣನು ಕಾಯಕದ ಕಾಣಿಯನ್ನು ಸೋಲುವ ದಕ್ಕೂ ಒಲ್ಲನು, ಗೆಲ್ಲುವದಕ್ಕೂ ಒಲ್ಲನು! ನನಗೆ ಮಾತ್ರ ಸಾಕುಸಾಕಾಗಿ ಹೋಯಿತು (ಹೋಗುವನು)

## ೬ನೇ ದೃಶ್ಯ.

(ಪೇಟೆಯ ಬೀದಿ)

ಶೆಟ್ಟಿ – ಓ! ಕಣ್ಣಿಯವನೇ! ನಿನ್ನ ಕಟ್ಟುರಿಯ ಕಣ್ಣಿಗಳೆಲ್ಲ ಖರ್ಚಾದವೋ!

ಲಿಂಗಪುರುಷ – ಖರ್ಚಾದವು

ಶೆಟ್ಟಿ – ಎಷ್ಟಕ್ಕೆ ಕೊಟ್ಟೆಯಪ್ಪಾ?

ಲಿಂಗಪುರುಷ – ಅವನ್ನೆಲ್ಲ ಸಾವಿರ ಹೊನ್ನುಗಳಿಗೆ

ಶೆಟ್ಟಿ – ಅಬ್ಬಾ! ಯಾರು ಕೊಂಡರು?

ಲಿಂಗಪುರುಷ – ಯಾರು ಕೊಂಡರು! ಕಣ್ಣಿ ಬೇಕಾದವರು ಕೊಂಡರು!

ಶೆಟ್ಟಿ.– ಯಾಕಪ್ಪಾ ಇಷ್ಟೇಕೆ ಬೇಸರ?

ಲಿಂಗಪುರುಷ.– ಬೇಸರವೇನು? ನನ್ನ ಒಡೆಯನಿಗೆ ಈ ವ್ಯಾಪಾರ ಸರಿ ಬರಲಿಲ್ಲ!

ಶೆಟ್ಟಿ – ಇದು ಸರಿಯಾದ ಬೆಲೆ ಬರಲಿಲ್ಲವಂತೆ?

ಲಿಂಗಪುರುಷ.– ವಾಸ್ತವಿಕ ಬೆಲೆ ಬರಲಿಲ್ಲವಂತೆ!

ಶೆಟ್ಟಿ.– ಏನು, ಎರಡು ಸಾವಿರ ಹೊನ್ನು ಬೇಕಿದ್ದವೋ?

ಲಿಂಗಪುರುಷ – ಹಾಗಲ್ಲ! ಸಾವಿರ ಹೊನ್ನುಗಳೇ ವಾಸ್ತವಿಕಕ್ಕಿಂತ ಹೆಚ್ಚು ಬೆಲೆಯಂತೆ!

ಶೆಟ್ಟಿ – ಹಾಗಾದರೆ?

ಲಿಂಗಪುರುಷ – ಹಾಗಾದರೆ, ವ್ಯವಹಾರ ಸುಳ್ಳು!

ಶೆಟ್ಟಿ – ಸಾವಿರ ಹೊನ್ನು ಕೊಟ್ಟು ಕಣ್ಣಿಗಳನ್ನು ಮರಳಿ ತರುವೆಯಾ?

ಲಿಂಗಪುರುಷ – ಸಾವಿರ ಹೊನ್ನು ಮಾತ್ರ ಕೊಡುತ್ತೇನೆ, ಕಣ್ಣಿ ಮಾತ್ರ ತಿರುಗಿ ತರುವದಿಲ್ಲ

ಶೆಟ್ಟಿ – ಕೈ ಬೀಸುತ್ತ ಮನೆಗೆ ಬರುವೆಯಾ?

ಲಿಂಗಪುರುಷ – ಕಣ್ಣಿಗಳಷ್ಟು ಬೆಲೆ ಮಾತ್ರ ತರುವೆನು

ಶೆಟ್ಟಿ – ನಿನ್ನ ಗಿರಾಕಿಯ ಮನೆ ಬಹಳ ದೂರವೆಂದು ಕಾಣುತ್ತದೆ! ಬಿಸಿಲಲ್ಲಿ ಬರಿಗಾಲಿನಿಂದ ಯಾಕೆ ನಡೆದುಹೋಗುತ್ತೀ?

ಲಿಂಗಪುರುಷ – ಯಾವ ನೆರಳಲ್ಲಿ ಕುಳಿತುಕೊಳ್ಳಲಿ? ಯಜಮಾನರು ಸಿಟ್ಟಾದಾರು

ಶೆಟ್ಟಿ – ಮುಂದಿನದೇ ನಮ್ಮಂಗಡಿ! ಅಲ್ಲಿಗೆ ನಡೆ, ಅಲ್ಲಿಯೇ ನಿನಗೆ ಬೇಕಾಗುವಂತೆ ಅನುಕೂಲಮಾಡಿಕೊಡುವೆ

ಲಿಂಗಪುರುಷ – ಅಂದರೆ?

ಶೆಟ್ಟಿ – ಸಾವಿರ ಹೊನ್ನು ಕೊಟ್ಟು ಬಿಡು ಕಂಣಿಯ ಬೆಲೆ ತೆಗೆದುಕೊಂಡು ಹೋಗು

ಲಿಂಗಪುರುಷ – ಜಾಣ ಹುಡುಗ ಕಾಣಿಸುತ್ತೀ? ನಾನು ಬಸವಣ್ಣನವರ ಮನೆಯವರೆಗೆ ಹೋಗಬೇಕು ಈ ಹಣ ಅವರದು!

ಶೆಟ್ಟಿ – (ನಾಲಿಗೆ ಕಚ್ಚಿ) ಬಸವಸಚಿವರದೇ? ಬಿಸಿಲಲ್ಲ ನಿಮಗೆ ತೊಂದರೆಯಾಗುವದೆಂದು ಹಾಗೆ ಹೇಳಿದೆ, ಕ್ಷಮಿಸಿರಿ

(ಇಬ್ಬರೂ ಹೋಗುವರು)

## ೫ನೇ ದೃಶ್ಯ

(ಚಂದಯ್ಯನ ಮನೆಯಲ್ಲಿ)

**ಚಂದಯ್ಯ** – (ಲಿಂಗಪುರುಷನು ಕೊಟ್ಟ ಹಣ ತಕ್ಕೊಂಡು) ಇದೀಗ ಸರಿಯಾದ ಹಣ! ಇಷ್ಟು ಹಣದಿಂದ ಜಂಗಮ ದಾಸೋಹವನ್ನು ಅದೆಂತು ನಡೆಸುವೆನು ನೋಡು! ಅಂಗಡಿಗೆ ಹೋಗಿ ನಾನು ಹೇಳಿದ ಪದಾರ್ಥಗಳನ್ನು ಕೊಂಡು ತಕ್ಕೊಂಡು ಬಾ

**ಲಿಂಗಪುರುಷ** – ದಿನಾಲು ಅಂಗಡಿಗೆ ಎಡತಾಕುವದಕ್ಕಿಂತ ಒಮ್ಮೆಲೆ ತಂದಿಟ್ಟುಕೊಂಡರೆ ಹೇಗ!

**ಚಂದಯ್ಯ** – ಹಣವೂ ಅಷ್ಟೊಂದು ಇರುವದಿಲ್ಲ! ಸಂಗ್ರಹ ಬುದ್ಧಿಯೂ ಒಳ್ಳೆಯದಲ್ಲ!

**ಲಿಂಗಪುರುಷ** – ಹಣ ಇರದಿದ್ದರೆ ಉದ್ದರಿ ತರಬಹುದು ಆದರೆ ಸಂಗ್ರಹ ಬುದ್ಧಿ ಒಳ್ಳೆಯದಲ್ಲವೆನ್ನುವಿಯಲ್ಲ!

**ಚಂದಯ್ಯ** – ಸಂಗ್ರಹಬುದ್ಧಿಯು ಜೂಜಿನಾಟವಿದ್ದ ಹಾಗೆ ಅದು ಪಾಪ ಸಂಗ್ರಹಿಸಿದಂತೆ!

**ಲಿಂಗಪುರುಷ** – ಒಳ್ಳೆಯದು, ಜಂಗಮಸೇವೆಯೆಂದು ದುಡಿಯದ ಜಂಗುಳಿಗೆ ಉಣಬಡಿಸುವಿರಲ್ಲ! ಇದು ಪಾಪಕರವಲ್ಲವೆ?

**ಚಂದಯ್ಯ** – ಜಂಗಮರೆಂದರ ಜನಜಂಗುಳಿಗೆಲ್ಲ ದೇವಮಾರ್ಗವನ್ನು ತೋರಿಸಿಕೊಡುವವರು ಅವರು ಪರಮಾತ್ಮ ವೃಕ್ಷಕ್ಕೆ ಬೇರುಗಳಿದ್ದ ಹಾಗ ಆ ಬೇರುಗಳಿಗೆ ನೀರು ಹನಿಸಿದಂತೆ ನನ್ನ ಜಂಗಮ ದಾಸೋಹ ಆದರಿಂದ ಪರಮಾತ್ಮ ವೃಕ್ಷವು ಪಲ್ಲವಿಸಿ ಪುಷ್ಪಿತವಾಗುತ್ತದೆ, ಅಲ್ಲದೆ ಸುಫಲವೂ ಆಗುತ್ತದೆ

**ಲಿಂಗಪುರುಷ** – ಇರಲಿ ಈ ವಿಷಯದಲ್ಲಿ ಇಂದು ಶಿವಾನುಭವ ಮಂಟಪದಲ್ಲಿ ಸಾಕಷ್ಟು ಚರ್ಚೆಯಾಗಲಿರುವದರಿಂದ ಈಗ ಹೆಚ್ಚು ಪ್ರಶ್ನೆಗಳನ್ನು ಕೇಳುತ್ತ ನಿನ್ನ ದಾಸೋಹ ಕಾರ್ಯಕ್ಕೆ ತಡೆಯುಂಟುಮಾಡಲಾರೆನು ಆದ್ದರಿಂದ ಮೊದಲು ನಾನು ಮಾಡಬೇಕಾದ ಕೆಲಸಗಳನ್ನೆಲ್ಲ ನನಗೆ ವಿವರಿಸು

ಚಂದಯ್ಯ – ಅಹುದು, ನಾವಿಬ್ಬರೂ ಇಂದು ಇಳಿಹೊತ್ತಿಗೆ ಶಿವಾನುಭವ ಮಂಟಪಕ್ಕೆ ಹೋಗಬೇಕಲ್ಲವೇ? ಹಾಗಾದರೆ ನಾವು ಮುಂದಿನ ಕೆಲಸಗಳಿಗೆ ತೊಡಗುವಾ

(ಒಳಗೆ ಹೋಗುವರು)

## ೭ನೇ ದೃಶ್ಯ.

(ಶಿವಾನುಭವ ಮಂಟಪದಲ್ಲಿ ಪ್ರಭುದೇವ, ಬಸವಣ್ಣ, ಮಾಚಿದೇವ, ಚೆನ್ನಬಸವಣ್ಣ ಮೊದಲಾದವರು ಕುಳಿತಿದ್ದಾರೆ ನುಲಿಯ ಚಂದಯ್ಯನು ಲಿಂಗಪುರುಷನೊಡನೆ ಅಲ್ಲಿಗೆ ಬಂದು ಎಲ್ಲರಿಗೂ ಸಾಷ್ಟಾಂಗವೆರೆಗುವನು)

ಪ್ರಭುದೇವ – ಯಾರು? ನುಲಿಯ ಚಂದಯ್ಯ ಶರಣರೇ?

ಚಂದಯ್ಯ – ಅಹುದು ಪ್ರಭುಗಳೇ!

ಮಾಚಿದೇವ – ಚಂದಯ್ಯ ಶರಣರಿಗೂ ಅವರ ಇಷ್ಟಲಿಂಗಕ್ಕೂ ಒಂದಿಷ್ಟು ಭಿನ್ನಾಭಿಪ್ರಾಯವುಂಟಾಗಿದ

ಲಿಂಗಪುರಷ – ಅಹುದು ಪ್ರಭೂ! ನಾನೇ ಚಂದಯ್ಯ, ಶರಣರ ಇಷ್ಟ ಲಿಂಗ, ಮನುಷ್ಯರೂಪ ಧಾರಣಮಾಡಿದ್ದೇನೆ

ಪ್ರಭುದೇವ – ಮನುಷ್ಯರೂಪ ಧಾರಣ ಮಾಡಿದ್ದೇಕೆ?

ಲಿಂಗಪುರುಷ – ಚಂದಯ್ಯನು ಜಂಗಮದಾಸೋಹ ಪ್ರಿಯನಾಗಿ ಲಿಂಗಪೂಜೆಗೆ ಅನಡ್ಡೆ ಮಾಡಿದ್ದರಿಂದ, ನಾನು ಒಂದಿಷ್ಟು ಮುನಿಸಿನಿಂದ ಅವನ ಕೊರಳ ಸೆಜ್ಜೆಯಿಂದ ನುಸುಳಿ ಕಳಗುರುಳಿದೆನು, ಅದನ್ನು ಕಂಡರೂ ಅವನು ನನ್ನನ್ನೆತ್ತಿಕೊಳ್ಳಲಿಲ್ಲ

ಪ್ರಭುದೇವ – ಮುಂದೇನಾಯಿತು?

ಚಂದಯ್ಯ – ಬೇಕೆಂತಲೇ ನುಸುಳಿಬಿದ್ದ ಕಾರಣ ನಾನು ಇಷ್ಟಲಿಂಗ ವನ್ನು ಎತ್ತಿಕೊಳ್ಳಲಿಲ್ಲ

ಪ್ರಭುದೇವ – ಸರಿಯಾಯಿತು, ಆಮೇಲೆ?

ಲಿಂಗಪುರುಷ – ಕಣ್ಣಿಯ ಕಾಯಕಕ್ಕೆ ಬೇಕಾದ ಹುಲ್ಲ ಹೊರೆ ಹೊತ್ತುಕೊಂಡು ಚಂದಯ್ಯನು ಮನೆಗೆ ಹೊರಟನು ಆಗ ನಾನು ಬರುವೆನು

ಎತ್ತಿಕೋ ಎಂದರೂ, ನಿನ್ನ ಭಾವವಿದ್ದಂತೆ ಮಾಡೆಂದು ಮುಂದೆ ಸಾಗಿದ್ದ ರಿಂದ ನಾನು ನಿರ್ವಾಹವಿಲ್ಲದೆ ಮನುಷ್ಯರೂಪ ಧರಿಸಿ ಬೆಂಬಲಿಸಿದೆನು

ಮಾಚಯ್ಯ – ಆಮೇಲೆ ನಾನು ಚಂದಯ್ಯನ ಕಾಯಕಕ್ಕೆ ನೆರವಾಗಿ ಜಂಗಮ ದಾಸೋಹ ಮುಗಿದ ಮೇಲೆ ನೀವಿಬ್ಬರೂ ಶಿವಾನುಭವ ಮಂಟಪಕ್ಕೆ ಬನ್ನಿರೆಂದು ತಿಳಿವಡಿಸಿದೆನು

ಲಿಂಗಪುರುಷ – ಹುಲ್ಲುಹೆರೆ ಹೊತ್ತು ಗೋಣು ನೋವಾಯಿತು ಹಗ್ಗ ಹೊಸೆದು ಕೈ ಉರಿದವು ಕಣ್ಣಿ ಮಾರುವದಕ್ಕೆ ಅಡ್ಡಾಡಿ ಕಾಲು ಹುರುವಳಿಸಿದವು ಇನ್ನೂ ಏನೇನೋ ಆಯಿತು ಅದು ಬಸವಣ್ಣನವರಿಗೆ ಗೊತ್ತಿದೆ ಕೇಳಿರಿ

ಬಸವಣ್ಣ – ಈಗ ಅದೆಲ್ಲ ಚರ್ವಿತಚರ್ವಣ ಬೇಡ ಚಂದಯ್ಯ, ನಿನ್ನ ಅಭಿಪ್ರಾಯವೇನು ?

ಚಂದಯ್ಯ – ಭಕ್ತಿಭಾಂಡಾರೀ ! ನನಗ ಲಿಂಗಪೂಜೆಗಿಂತ ಜಂಗಮ ದಾಸೋಹವು ಮಿಗಿಲೆಂದು ತೋರಿದೆ ಆದ್ದರಿಂದ ಅದನ್ನು ಅನುಸರಿಸಿದ್ದೇನ

ಮಾಚಯ್ಯ – ಲಿಂಗದಲ್ಲಿ ದೇವರನ್ನು ಕಾಣದೆ ಜಂಗಮದೊಳಗೆ ದೇವನನ್ನು ಹೇಗೆ ಕಾಣುವಿ ?

ಚಂದಯ್ಯ – ಗುರುಸೇವೆಯಿಂದ ಇಹದಲ್ಲಿ ಸುಖವಿದೆ ಲಿಂಗಸೇವೆಯಿಂದ ಪರದಲ್ಲಿ ಸುಖವಿದೆ ಆದರೆ ಜಂಗಮಸೇವೆ ಒಂದರಿಂದಲೇ ಇಹದಲ್ಲಿ–ಪರದಲ್ಲಿ ಕೂಡಿಯೇ ಸುಖವಿದೆ ಆದ್ದರಿಂದ ಜಂಗಮ ದಾಸೋಹವು ಘನತರವಲ್ಲವೇ ?

ಬಸವಣ್ಣ – ಅಂಗವಿರುವವರಿಗೆ ಲಿಂಗಪೂಜೆ ಬೇಕಲ್ಲವೇ ? ರತ್ನವಿದ್ದರೂ ಅದು ಕುಂದಣದಲ್ಲಿ ಸಂದಿಸಿರುತ್ತದೆ

ಚಂದಯ್ಯ – ಲಿಂಗದ ಜಡತೆಗಿಂತ ಜಂಗಮದ ಚೇತನದಲ್ಲಿ ಪರಮಾತ್ಮನನ್ನು ಕಾಣುವದು ಸುಲಭವಲ್ಲವೆ ?

ಪ್ರಭು – ಇಲ್ಲಿ ಕೇಳು ಚಂದಯ್ಯ ! ಲಿಂಗಪೂಜೆ ತನ್ನನ್ನು ತಾನು ಅರಿಯುವ ಮಾಟ, ಜಂಗಮಸೇವೆ ಸರ್ವತ್ರದಲ್ಲಿ ಸರ್ವೇಶ್ವರನನ್ನು ಕಾಣುವ

ಬಗೆ ಇವುಗಳಲ್ಲಿ ಯಾವುದನ್ನು ಬಿಟ್ಟರೂ ಕುಂಟು ಕುಂಟು ಪರಿಪೂರ್ಣ ಗುಹೇಶ್ವರ ಲಿಂಗಕ್ಕೆ ಒಪ್ಪದು

ಚಂದಯ್ಯ ,- ಸರ್ವತ್ರದಲ್ಲಿ ಸರ್ವೇಶ್ವರನನ್ನು ಕಾಣುವ ಬಗೆಯಾದ ಜಂಗಮಸೇವೆಗೆ ಲಿಂಗಸಾಕ್ಷಿಯಾಗಿರುವದರಿಂದ ತನ್ನರಿವಿನ ಕುರುಹು ಅಲ್ಲಿ ತೋರದೆ ಇರದು

ಬಸವಣ್ಣ – ಇವೆಲ್ಲ ನುಡಿಗಳೂ ನಮ್ಮ ನಮ್ಮ ಅನುಭವದ ಕುಡಿಗಳಾಗಿರುವದರಿಂದ ಅವರವರ ನಡುವಳಿಗೆ ಅವೇ ಆಧಾರಗಳು ಚಂದಯ್ಯ ಶರಣರೇ, ಗುರು-ಲಿಂಗ-ಜಂಗಮದ ರೀತಿಯನ್ನು ಶಿವಜ್ಞಾನಿಯಾದ ಚೆನ್ನಬಸವಣ್ಣನು ಬಲ್ಲನೆಂಬ ಮಾತು ನಿಮಗೆ ಸಮ್ಮತವಷ್ಟೇ!

ಚಂದಯ್ಯ – ಸಮ್ಮತವಿದೆ—ಭಕ್ತಬಾಕುಳಿ!

ಬಸವಣ್ಣ – ಹಾಗಾದರೆ ಚೆನ್ನಬಸವಣ್ಣನು ಈ ಮಾತಿನ ತೀರ್ಪು ಹೇಳಬೇಕು ಮತ್ತು ಅದಕ್ಕೆ ಇರ್ವರೂ ಒಪ್ಪಿಕೊಳ್ಳಬೇಕು

ಚಂದಯ್ಯ – ಆಗಲಿ, ನಾನು ಚೆನ್ನಬಸವಣ್ಣನವರ ಮಾತಿಗೆ ಒಪ್ಪಿಕೊಳ್ಳುತ್ತೇನೆ

ಲಿಂಗಪುರುಷ – ನಾನೂ ಅದಕ್ಕೆ ಸಮ್ಮತಿಸುತ್ತೇನೆ

ಚೆನ್ನಬಸವಣ್ಣ – ಗುರು-ಲಿಂಗ ಜಂಗಮಗಳು ಕೂಡಿದರೇ ಜಂಗಮದಾಸೋಹವಾಗುವದು ಗುರುಕರುಣವೇ ಲಿಂಗ, ಲಿಂಗದ ನಿಜತ್ವವೇ ಜಂಗಮ ಎಂದರಿತು ಆಚರಿಸುವದೇ ಬಹಿರಂಗವರ್ತನೆ ಸುಜ್ಞಾನವೇ ಜಂಗಮ, ಜಂಗಮದ ನಡೆಯೇ ಲಿಂಗ, ಅವೆರಡರ ಏಕತ್ವಸಿದ್ಧಿಯೇ ಗುರು, ಆದ್ದರಿಂದ ಜಂಗಮ ದಾಸೋಹವಿಲ್ಲದೆ ಲಿಂಗತೃಪ್ತಿಯಾಗದು!

ಚಂದಯ್ಯ – ಕೇಳಿರಿ ಬಹಳ ಸರಿಯಾದ ಮಾತು!

ಚೆನ್ನಬಸವಣ್ಣ – ಅದರಂತೆಯೇ ಅಂಗದ ಮೇಲೆ ಲಿಂಗವಿಲ್ಲದಿದ್ದರೆ ಜಂಗಮಸೇವೆಯೂ ಘಟಿಸಲಾರದು

ಲಿಂಗಪುರುಷ – ಕೇಳಿರಿ ತೀರಾ ಸರಿಯಾದ ಮಾತು!

ಚೆನ್ನಬಸವಣ್ಣ – ಅಂಗವೇ ಮಣ್ಣು, ಲಿಂಗವೇ ಮರವು, ಫಲವೇ ಜಂಗಮವು, ಫಲದ ರುಚಿಯೇ ಪ್ರಸಾದವು

ಮಾಚಿದೇವ – ಕೇಳಿದೆಯಾ ಚಂದಯ್ಯ! ಲಿಂಗಪುರುಷನೇ, ಕೇಳಿಸಿತೇ?

ಚಂದಯ್ಯ – ಶರಣವೃಂದಕ್ಕೆಲ್ಲ ನನ್ನ ಸಾಷ್ಟಾಂಗ ನಮಸ್ಕಾರಗಳು ಈ ಹೊತ್ತು ತಾವೆಲ್ಲರೂ ನನಗೊಂದು ಹೊಸಬೆಳಕನ್ನು ತೋರಿಸಿಕೊಟ್ಟಿರಿ ಅದಕ್ಕೆ ಈ ದಾಸನು ಋಣಿಯಲ್ಲದೆ ಇನ್ನೇನು?

ಮಾಚಿದೇವ – ಚಂದಯ್ಯ ಶರಣರೇ, ನಿಮಗಿದ್ದ ತಿಳುವಳಿಕೆಯು ಒಂದು ಮಗ್ಗುಲಿನದಾದರೂ ಅದು ನಮ್ಮೆಲ್ಲರಿಗೂ ವೇದ್ಯವಾದುದು ಪುಣ್ಯ ಪ್ರಸಂಗವೇ ಸರಿ ಇಡಿಯದನ್ನು ಅರಿಯುವದಕ್ಕೆ ಸಾಧನವಾಗಬೇಕೆಂದೇ ಈ ಮಂಟಪದ ನಿರ್ಮಾಣವಾಗಿದ

ಚಂದಯ್ಯ – ಭಕ್ತನು ತನ್ನಲ್ಲಿಯೇ ಗುರುತತ್ವ ಜಂಗಮತತ್ವಗಳನ್ನು ಉಂಟುಮಾಡಿಕೊಂಡು ಲಿಂಗಾಂಗಸಾಮರಸ್ಯವನ್ನು ಹೊಂದತಕ್ಕದ್ದು ಆದ್ದರಿಂದ ಪುರುಷರೂಪದಲ್ಲಿರುವ ಚಂದೇಶ್ವರ ಲಿಂಗವೇ, ನಿನ್ನ ಮೊದಲಿನ ಸ್ಥಳಕ್ಕೆ ಒಂದು ಜಂಗಮದಾಸೋಹದಂತ ನನ್ನಿಂದ ಲಿಂಗಸೇವೆಯನ್ನೂ ಸ್ವೀಕರಿಸು

ಲಿಂಗಪುರುಷ – ಬಂದೆ ನನ್ನೊಡೆಯಾ! ನಾನು ನಿನ್ನಿಂದ ಪೂಜೆಗೊಂಡರೂ ನಿನ್ನ ಜಂಗಮದಾಸೋಹಕ್ಕೆ ತ್ರಿಕರಣಪೂರ್ವಕವಾಗಿ ಸಹಭಾಗಿಯಾಗುತ್ತೇನೆ (ಚಂದಯ್ಯನನ್ನು ಸಮೀಪಿಸಿ ಅವನಲ್ಲಿ ಲೀನವಾಗುವನು)

ಶರಣರೆಲ್ಲರೂ –

ಜಯ ಪ್ರಭೋ! ಜಯ ಬಸವೇಶ! ಜೈ! ಜೈ!! ಜೈ!!!



# ಮೊದಲನೇ ದೇಶದ್ರೋಹಿ



## ೧ ನೇ ನೋಟ—ಮೊದಲ ಮಾತು

ಒಬ್ಬ – ಇಂದು ಆಡುವ ನಾಟಕ ಕಲ್ಪಿತ ಕಥೆಯಲ್ಲ, ಆಗಿಹೋದ ಇತಿಹಾಸ ದೇಶಕಲ್ಯಾಣಕ್ಕೆ ಪ್ರತ್ಯಕ್ಷವಾಗಿ ಆಗಲಿ, ಅಪ್ರತ್ಯಕ್ಷವಾಗಿ ಆಗಲಿ ಅಡ್ಡಿಯಾಗುತ್ತಿರುವ ನಮ್ಮಂಥ 'ದೇಶದ್ರೋಹಿ' ಗಳಿಗೆ ಆದಿ ಪುರುಷನೆನಿಸಿಕೊಂಡ ತಕ್ಷಶಿಲನ ಪರಿಚಯವನ್ನು ಮಾಡಿಕೊಳ್ಳುವ ಕುತೂಹಲವು, ಅವನ ತಳಿಯುವರಾದ ನಮಗೆ ಅತಿಶಯವಾಗಿ ಇರಬೇಕಷ್ಟೇ? ಸಹಸ್ರ ವರುಷಗಳಿಂದ, ಲಕ್ಷಾವಧಿ ಶೂರ–ದೇಶಭಕ್ತರ ದೇಹ–ಪ್ರಾಣಗಳ ಗಚ್ಚುಗಲ್ಲುಗಳಿಂದ ಬಂಧುರವಾಗಿ ನಿಂತ ಸ್ವಾತಂತ್ರ್ಯ ಮಂದಿರವು, ಕಲವೊಂದು ದೇಶದ್ರೋಹಿಗಳ ಸ್ವಾರ್ಥ-ಜ್ವಾಲಾಮುಖಿಯಿಂದ ನಿಮಿಷದಲ್ಲಿಯೇ ಹಾಳಾಗಿ, ಹುಗಿದುಹೋಗುವುದನ್ನು ತೋರಿಸುವುದು ಆ ಆದಿಪುರುಷನ ಚರಿತ್ರೆ ಹೇಗನ್ನುವಿರಾ? ಹಾಗಾದರೆ ಈ ನಾಟಕವನ್ನು ಏಕಚಿತ್ತದಿಂದ ಸಂಪೂರ್ಣವಾಗಿ ಆಲಿಸಿರಿ ಅಷ್ಟೇ (ಕೈಮುಗಿದು ಹೋಗುವನು.)

## ೨ ನೇ ನೋಟ—ರಾಜದರಬಾರ್

ಪೋರಸ – ಸೇನಾಪತೀ, ನನ್ನ ಸೂಚನೆಯಂತೆ ಎಲ್ಲ ವ್ಯವಸ್ಥೆ ಆಯ್ತೆ?

ಸೇನಾಪತಿ – ದೊರೆಗಳಿಗೆ ಆದೊಂದೂ ಚಿಂತೆ ಬೇಡ ಆ ತಕ್ಷಶಿಲನನ್ನು ಮಿಸುಕುಗೊಡದಂತೆ ಸೈನ್ಯ ವ್ಯವಸ್ಥೆಯಾಗಿದೆ ಅವನ ಸೀಮೆಯ ಸುಲಿಗೆಯೇ ನಮ್ಮ ನಿತ್ಯಕಾರ್ಯ, ಬೆಳೆ-ಬಾವಿಗಳನ್ನು ಹಾಳು ಮಾಡುವುದೆಂದರೆ, ನಮ್ಮ ಸೈನ್ಯಕ್ಕೆ ಉಬ್ಬು ಪಂಜಾಬದ ಈ ಪಂಚನದಿಗಳನ್ನು ನಿಲ್ಲಿಸಿಬಿಡಬೇಕೆಂದರೂ ಅಸಾಧ್ಯವಲ್ಲ, ನಮ್ಮ ಸೈನ್ಯಕ್ಕೆ!

**ಪೋರಸ** – ತಕ್ಷಶಿಲೆಯನು, ಇಷ್ಟು ಕಾಟಗಳನ್ನು ಬಳಿಯಿಟ್ಟುಕೊಂಡು ಸೈರಿಸುವ ಕಾರಣವೇನು? ವೀರನಾಗಿದ್ದರೆ ಪ್ರತಿಬಂಧಿಸಬೇಕು ಇಲ್ಲವೆ ಬಾಯಲ್ಲಿ ಹುಲ್ಲುಕಡ್ಡಿ ಹಿಡಿದು ಶರಣು ಬರಬೇಕು!

**ಸೇನಾಪತಿ** – ತಕ್ಷಶಿಲೆಯನಿಗೆ, ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳ ಗಿದ್ದರ? ಅನ್ನುವಂತಾಗಿದೆ

**ಪೋರಸ** – ಸೇನಾಪತೀ, ಧೂರ್ತನಾಗಿರು ಹಾವಿನ ಮರಿ ಅದು— ವಿಷಕಂಟಕ!

**ಸೇನಾಪತಿ** – ಹಾವಿನ ತಲೆಯ ಮೇಲೆ, ಮಂತ್ರದ ಬೇರು ಇಟ್ಟು ಬಹುಕಾಲವಾಯ್ತು! ಪೋರಸ ಮಹಾರಾಜರ ನಾಮಸ್ಮರಣೆ ಮಾಡಿದಾಗಲೇ ಅದಕ್ಕೆ ಮುಕ್ತಿ!! ಇದಕ್ಕೇನೂ ಅಭ್ಯಂತರವಿಲ್ಲ

**ಪೋರಸ** – ಅಭಿಮಾನಿಯಾದ ಆತನು, ನಮ್ಮ ಕೇಡು ಬಗೆಯುವ ಸಮಯವನ್ನೇ ಇದಿರು ನೋಡುತ್ತಿರುವುದು ಸಹಜ ಎಚ್ಚರಿಕೆಯಿರಲಿ

**ಸೇನಾಪತಿ** – ದೊರೆಗಳಾಜ್ಞೆ (ಮಣಿಯುವನು)

## ೩ನೇ ನೋಟ–ಅರಮನೆಯ ಮುಂಭಾಗ

**ತಕ್ಷಶಿಲ** – (ಪ್ರವೇಶಿಸಿ) ಆಗಲಿಕ್ಕಿಲ್ಲವೇ? ವೀರಶ್ರೀಯ ಕೃಪೆಯು ನನ್ನ ಮೇಲೆ ಇನ್ನೆಂದೂ ಆಗಲಿಕ್ಕಿಲ್ಲವೇ? ಸೈನ್ಯವು ರಣಭೂಮಿಯಲ್ಲಿ ಒರಗಲಿ, ರಾಜ್ಯವು ಹಾಳಾಗಲಿ, ರಾಜವಂಶವು ನಿರ್ಮೂಲವಾಗಲಿ! ಆ ಪೋರಸನ ಕೋಡು ಮುರಿದಾಗಲೇ, ನನ್ನ ಆತ್ಮಕ್ಕೆ, ನನ್ನ ಪಿತೃಪಿತಾ ಮಹರ ಆತ್ಮಕ್ಕೆ ಶಾಂತಿ! ಈ ಶಾಂತಿಸಾಧನೆಗಾಗಿ, ನಾನು ಯಾವ ಯಜ್ಞ ಹೂಡಲಿ? ಇಂಥ ಒಂದು ಕ್ಷುಲ್ಲಕ–ಕಾರ್ಯವನ್ನು ಸಾಧಿಸಲಾಗದ ನಾನು, ರಣದಲ್ಲಿ ಮಡಿದರೇನು? ವನದಲ್ಲಿ ಸತ್ತರೇನು? ಸ್ವರ್ಗವಾಸಿಗ ಳಾದ ವೀರ–ಪೂರ್ವಜರು ತಮ್ಮ ಬಳಿ ಬರಗೊಡುವರೇ ನನ್ನನ್ನು? (ತಡೆದು) ಈ ಮನಸ್ಸಿನ ವಿಚಾರಪರಂಪರೆಗಳಿಗೆ ಕೊರಗಲಾ? ಪೋರಸನ ಸೈನ್ಯದವರು ನಮ್ಮ ನಾಡಿನಲ್ಲಿ ನಡೆಸಿದ ಅತ್ಯಾಚಾರದ ಕಾಟಗಳಿಗೆ ಮರುಗಲಾ?

**ಸೇವಕ** – (ಬಂದು ವಂದಿಸಿ) ದೊರೆಗಳೇ, ಪಡುವಣ ನಿಟ್ಟಿನ ಅಧಿಕಾರಿಗಳ ಕಡೆಯಿಂದ ಒಬ್ಬ ದೂತನು ಬಂದಿರುವನು

ತಕ್ಷಲಿಸ – ಅವನನ್ನಿತ್ತ ಬರಮಾಡು

ಸೇವಕ – ಅಪ್ಪಣೆ (ಹೋಗುವನು)

ತಕ್ಷಲಿಸ – ಆ ನಿಟ್ಟಿಗೂ ಮುಟ್ಟಿತೇ ಈ ಪೋರಸನ ಕಾಟ? ಅದಕ್ಕಾಗಿಯೇ ದೂತ ಬಂದಿದ್ದಾನು

ದೂತ – (ಬಂದು ವಂದಿಸಿ) ಸೀಮೆಯ ಅಧಿಕಾರಿಗಳಿಂದ ಓಲೆ ತಂದಿದ್ದೇನೆ (ಕೊಡುವನು)

ತಕ್ಷಲಿಸ – (ಒಡೆದೋದಿ) ಮನೆಯ ಪೀಡೆಯೊಂದಿಗೆ ಹೊರಗಿನ ಪೀಡೆ ಬೇರೆ? ಗ್ರೀಸ ದೇಶದವನಂತ! ಅಲೇಕ್ಸಂಡರ! ಅಬಾ! ಇಂಥ ವೀರ ವಿಕ್ರಮನು, ನಮ್ಮಂಥ ನರಚಾರಿಗಳ ತೆಕ್ಕೆಗೇಕೆ ಬಿದ್ದನೋ? ಪಶ್ಚಿಮ ನಾಡುಗಳನ್ನೆಲ್ಲ ಗೆಲ್ಲುತ್ತ, ರಣಸಮರ್ಥರಾದ ಸೈನಿಕರೊಡನೆ, ಭರತಖಂಡಕ್ಕೆ ತಲುಪಿದನೇ? ಆತನದು ಸುರಿತ ಸೈನ್ಯ! ನಮ್ಮ ಮೇಕೆಗಳನ್ನು ಮುಂದೆ ಮಾಡಿಕೊಂಡು, ಆ ದಿಗ್ವಿಜಯಿಗಳಾದ ಬಿಳಿಯರದುರಿಗೆ ಹೋರಾಡಬೇಕೆ? ಇಲ್ಲೇ ಪೋರಸನೊಡನೆ ಕಾದಲಿಕ್ಕ ತಕ್ಕ ಸೈನ್ಯವಿಲ್ಲದ ನಾನು, ತ್ರೈಲೋಕ್ಯ ವೀರನಾದ ಅಲೇಕ್ಸಂಡರನೊಡನೆ ಹೋರಾಡಲೆಂತು? ಇದಕ್ಕೊಂದು ಯುಕ್ತಿ ತೆಗೆಯಬೇಕು (ವಿಚಾರಿಸಿ) ಹೌದು! ಪೋರಸನನ್ನು ಮಣಿಸುವ ಸಮಯವಿದೇ! ಮೊದಲೇ ಅಲೇಕ್ಸಂಡರನೊಡನೆ ಕೂಡಿಕೊಂಡು, ಆಳಲಿ ಸಹಾಯವೆಂಬಂತೆ, ಆ ಹುಲಿಯನ್ನು ತಂದು, ಈ ಹುಲ್ಲೆಯ ಮುಂದೆ ನಿಲ್ಲಿಸಬೇಕು ಓಡಾಡಲಿ ಪೋರಸನು ಹುಲ್ಲೆಯಾಗಿ ಹುಲಿಯ ಮುಂದೆ ಚಿಗರಿಯಾಟವೇ? ಪೋರಸನ ಸರ್ವನಾಶವಾಗುವದೇ ನಿಶ್ಚಯ! ಅಹ್ಹಹ್ಹ! ಎಂಥ ಸೋಗಸಾದ ಪ್ರಸಂಗ! ನನ್ನ ಮೊರೆಯನ್ನು ಕೇಳಿ, ದೇವರೇ ಈ ಅಲೇಕ್ಸಂಡರನೆಂಬ ದೂತನನ್ನು ಇತ್ತ ಕಳಿಸಿದನು' ಅನ್ನು ಪೋರಸಾ, ನನಗೆ ಶರಣು ಬಾ' ಅನ್ನು ನೋಡೋಣ ಇನ್ನು! ಅಲೇಕ್ಸಂಡರನೆಂಬ ಕಿರಾತನ ಮಗ್ಗುಲಲ್ಲಿ ಪವಡಿಸಿದ ಹುಲಿಮರಿಯನ್ನು ಪೋರಸನಂಥ ತೀಸ್ಮಾರ್ಖಾನು ಕೆಣಕಬಹುದೇ? ಇನ್ನು ಸಾವಕಾಶ ಮಾಡಿ ಫಲವಿಲ್ಲ ನನಗಿಂತ ಮೊದಲೇ ಪೋರಸನು ಯುಕ್ತಿ ತೆಗೆದಾನು ಇಂದಿನದಿಂದೇ ಕಳಿಸಬೇಕು ವಕೀಲನನ್ನು, ಅಲೇಕ್ಸಂಡರನ ಬಿಡಾರಕ್ಕೆ (ದೂತನಿಗೆ) ನಿನ್ನ ಅಧಿಕಾರಿಗಳಿಗೆ ತಿಳಿಸು, ನಿಶ್ಚಿಂತೆಯಿಂದಿರೆಂದು, ನಮಗೆ ಯಾವ ಆಪತ್ತೂ ಇಲ್ಲ

ದೂತ — (ವಂದಿಸಿ) ದೊರೆಗಳಾಜ್ಞೆ (ಹೋಗುವನು)

ತಕ್ಷಲಿಸ — ಈ ವಿಚಾರವನ್ನು ಮಂತ್ರಿಗೂ ತಿಳಿಸಬಾರದು ಆ ವೃದ್ಧನು ವಿಘ್ನ ತಂದಿಟ್ಟಾನು

## ೪ನೇ ನೋಟ—ಅಲೇಕ್ಸಂಡರನ ಪಾಳಯ

ಅಲೇಕ್ಸಂಡರ — (ಆರಾಮ ಖುರ್ಚಿಯ ಮೇಲೆ ಕುಳಿತಿರುವನು) ಸಮಸ್ತ ದೇಶಗಳನ್ನು ಜಯಿಸಬೇಕೆಂದು, ಅಪಾರಸೇನಾ ಸಮುದ್ರದೊಡನೆ ಬಂದರೆ, ಭರತಖಂಡವು ಜಯಿಸಲಿಕ್ಕೆ ಅಶಕ್ಯಕೋಟಿಯೆಂದೆನಿಸಹತ್ತಿದೆ ಭರತ ಖಂಡವನ್ನು ರಕ್ಷಿಸಲಿಕ್ಕೆಂದು ಈ ಸಿಂಧು ನದಿಯೇ ಅಪಾರಸೇನೆಯಾಗಿ, ನನ್ನ ಸೇನಾಸಮುದ್ರವನ್ನು ತಡೆದುಬಿಟ್ಟಿದೆ ನದಿಯ ತರಂಗಗಳು ಈರ್ಷೆಯಿಂದ ಮೈ ಹೊರಳಿಸುತ್ತ ನಮ್ಮ ಸೈನ್ಯವನ್ನು ಹೀಯಾಳಿಸುವಂತೆ, ಒಂದರಹಿಂದೊಂದು ಆನೆಯಂತೆ ಬರುತ್ತಿವೆ ಜಗನ್ನಿಯಾಮಕನು, ಭರತ ಖಂಡವನ್ನು ರಕ್ಷಿಸಲಿಕ್ಕೆ ಬದ್ಧಕಂಕಣನಾಗಿ ನಿಂತು, ಈ ಸಮುದ್ರಾಸ್ತ್ರವನ್ನು ಒಗೆದುಬಿಟ್ಟಿದ್ದಾನೆ! ಅಹ್ಹಹ್ಹ! ಏನು ಸೌಭಾಗ್ಯದ ನಾಡಿದು! ಆರ್ಯರ ಪವಿತ್ರ ಧರ್ಮಭೂಮಿಯನ್ನು ಪರಕೀಯರು ಸೋಂಕಬಾರದೆಂದು, ಆಜ್ಞೇಯವಾದ ಸಮುದ್ರ ನಿರ್ಮಾಣವಿದು! ಅಧಿಕಾರೀ, ಮುಂದಿನ ಯೋಚನೆ?

ಅಧಿಕಾರಿ — ಯೋಚನೆ ಮತ್ತೇನು? ಸೇತುಬಂಧನ!

ಅಲೇಕ್ಸಂಡರ — ನರಿ ಅಲ್ಲಿಯ ವರೆಗೆ ಈ ವಿರಗತ್ತಿಯು ಜಂಗು ತಿನ್ನಬೇಕೇ? ಈ ಸಮರಬಂಟನು, ರುಧಿರಾಹಾರವಿಲ್ಲದೆ ಜೀವ ಹಿಡಿಯಬೇಕೇ?

ಅಧಿಕಾರಿ — ದೊರೆಗಳೇ, ಪಂಜಾಬದ ರಾಜರುಗಳು ತಮ್ಮತಮ್ಮೊಳಗೆ ಕಡಿದಾಡುತ್ತ, ಬಲಹೀನರಾಗಿದ್ದಾರಂತೆ! ಈ ಸಿಂಧು ನದಿಯೊಂದು ಹಾದಿ ಕೊಟ್ಟರಾಯ್ತು, ನಮಗೆ ವಿಜಯವು ಕಟ್ಟಿಟ್ಟದ್ದೇ

ಅಲೇಕ್ಸಂಡರ — ಸಾಕು! ಭರತಖಂಡದ ಧರ್ಮ ರಕ್ತದಿಂದ ಕೊನೆಯ ಸ್ನಾನವಾದರೆ, ಈ ಕತ್ತಿಗಿನ್ನು ವಿಶ್ರಾಂತಿ! ಇತಿಹಾಸಕ್ಕೇ ಹೊಸದಾದ ಈ ದಿಗ್ವಿಜಯದ ಕೀರ್ತಿಧ್ವಜವು, ಚಿರಕಾಲ ಮೆರೆಯಲಿ ಬಿಳಿಯರು ಭಾರತೀಯರನ್ನು ಮೊದಲು ಜಯಿಸಿದ ಸಂಗತಿಯು ಪಂಜಾಬದ ಶಿಲಾಲೇಖವಾಗಲಿ.

**ಸೇವಕ** – (ವಂದಿಸಿ) ಪಂಜಾಬದ ದೊರೆಯಾದ ತಕ್ಷಲಿಸನ ಕಡೆಯಿಂದ ಒಬ್ಬ ರಾಯಭಾರಿ ಬಂದಿದ್ದಾನೆ

**ಅಲೇಕ್ಸಂಡರ** – ಆತನೆಲ್ಲಿ? ಇತ್ತ ಬರಲಿ

**ರಾಯಭಾರಿ** – (ಬಂದು ಮಣಿದು) ತಮ್ಮ ಶುಭಾಗಮನಕ್ಕಾಗಿ, ತಕ್ಷಲಿಸ ದೊರಗಳು ತುಂಬ ಸಂತೋಷಪಟ್ಟಿದ್ದಾರೆ

**ಅಲೇಕ್ಸಂಡರ** – ಸಂತೋಷಪಟ್ಟಿದ್ದಾರೆ? ಹೇಗೆ? ನಾನು ದಿಗ್ವಿಜಯಕ್ಕೆ ಬಂದವ! ವೈರಿಯು ದಂಡೆತ್ತಿ ಬಂದರೆ, ನಿಮ್ಮ ದೊರೆಗೆ ಸಂತೋಷವೇ?

**ರಾಯಭಾರಿ** – ಇನ್ನೆಲ್ಲಿ ವೈರತ್ವ? ಆ ವೈರತ್ವದ ಬಿರುಗಾಳಿಯಡಗಿ, ಮಿತ್ರತ್ವದ ಸುಳಿಗಾಳಿಯು ಸುಳಿಯಲೆಂದೇ ನಮ್ಮ ದೊರೆಗಳ ಹಾರೈಕೆ

**ಅಲೇಕ್ಸಂಡರ** – ಅಧಿಕಾರೀ, ಇದರಲ್ಲಿ ಮೋಸವಿರಬಹುದಷ್ಟೇ?

**ಅಧಿಕಾರಿ** – ಮೋಸವಿರಲಿ, ಇಲ್ಲದಿರಲಿ ಪರಕೀಯರಾದ ನಾವು ಬಲು ಜಾಗ್ರತೆಯಿಂದ ಇರಬೇಕಷ್ಟೇ?

**ರಾಯಭಾರಿ** – ನಿಮಗೆ ಸಂಶಯವುಂಟಾಗುವುದು ಸಹಜವೇ ಕೇಳಿ- ನಮ್ಮ ದೊರೆಗೂ, ಪೋರಸನಿಗೂ ಹಗೆತನವಿದೆ ಆ ಹಗೆತನವನ್ನು ತಮ್ಮ ನೆರವಿನಿಂದ ತೀರಿಸಿಕೊಳ್ಳಲಿಕ್ಕೆ ಆಶೆಪಟ್ಟಿದ್ದಾರೆ, ತಕ್ಷಲಿಸದೊರೆಗಳು

**ಅಲೇಕ್ಸಂಡರ** – ಸರಿ ನಮ್ಮ ಸಹಾಯ ಬಯಸುವ ನಿಮ್ಮ ದೊರೆಯು, ನಮಗೆ ಸಹಾಯ ಮಾಡಬೇಕು ಮೊದಲು

**ರಾಯಭಾರಿ** – (ಆನಂದದಿಂದ) ಯಾವ ಸಹಾಯ? ತಿಳಿಸಿದರೆ ನಮ್ಮ ಶಕ್ತಿಮೀರಿ ನೆರವಾಗುವುದರಲ್ಲಿ ಸಂಶಯವಿಲ್ಲ

**ಅಲೇಕ್ಸಂಡರ** – ಸಹಾಯವೇನು? ಈ ಸಿಂಧು ನದಿಯು ತಡೆದದ್ದರಿಂದ ನಮ್ಮ ಮುಂದಿನ ಕಾರ್ಯಕ್ರಮಗಳೆಲ್ಲ ಕಟ್ಟಾಗಿಬಿಟ್ಟಿವೆ ನಿಮ್ಮವನಾದ ಪೋರಸನೊಡನೆ ವಿಶ್ವಾಸದಿಂದ ನಡೆಯದೆ, ನನ್ನಂಥ ಪರಕೀಯನೊಡನೆ ವಿಶ್ವಾಸವೆಂದರೆ, ನನಗ ನಂಬುಗೆಯಾಗಲೊಲ್ಲದು ಸಿಂಧು ನದಿಯನ್ನು ದಾಟಿ, ಆಚೆಯ ನಾಡಿನಲ್ಲಿ ಕಾಲಿಡುವಂತೆ, ಇಂದೇ ಅನುಕೂಲ ಮಾಡಿಕೊಡಲಿ, ಅಂದರೆ ಮಿತ್ರತ್ವದ ಚಿಹ್ನ

ರಾಯಭಾರಿ – ಅದಕ್ಕೇನೂ ಅಭ್ಯಂತರವಿಲ್ಲ ನೀವು ನಿಶ್ಚಿಂತವಾಗಿರಿ ಇಷ್ಟಲ್ಲದೆ, ಧನಸಹಾಯ, ಜನಸಹಾಯ ಯಥೇಚ್ಛವಾಗಿ ಸಿಗುವದು ಒಳ್ಳೇದು (ಮಣಿದು ಹೊರಡುವನು)

ಅಲೇಕ್ಸಂಡರ – ನೋಡಿದಿಯಾ ಅಧಿಕಾರಿ? ದೇಶದ್ರೋಹಿ! ಬಂಧು ದ್ರೋಹಿ!! ಇಂಥವರನ್ನು ಗೆಲ್ಲುವುದೇನು ಪೌರುಷವಲ್ಲ ಇವರ ಮೇಲೆ ವಿಶ್ವಾಸವೂ ಅಷ್ಟಕಷ್ಟೇ ಪವಿತ್ರಭೂಮಿಯಾದ ಭರತಖಂಡದಲ್ಲಿ, ಇಂಥ ದ್ರೋಹಿಗಳು ಹುಟ್ಟಿದ ಕಲ್ಪನೆ ಕೂಡ ನನಗಿರಲಿಲ್ಲ ಅಧಿಕಾರೀ, ನಮ್ಮ ವಿಜಯದಲ್ಲಿ ವಿಶ್ವಾಸವು ದೃಢತರವಾಗಹತ್ತಿತು

ಅಧಿಕಾರಿ – ದೊರೆಗಳೇ, ನಮ್ಮ ಕಾರ್ಯಸಾಧನೆಯಲ್ಲಿ ಈ ತಕ್ಷಲಿಸನ ಮೂಗನ್ನೂ ಚೆನ್ನಾಗಿ ಹಿಡಕೊಂಡುಬಿಡಬೇಕು

ಅಲೇಕ್ಸಂಡರ – ಅಷ್ಟೇ, ಅಷ್ಟೆ

(ಹೋಗುವರು)

## ೫ ನೇ ನೋಟ–ತಕ್ಷಲಿಸನ ದರ್ಬಾರ

[ ತಕ್ಷಲಿಸ, ಪ್ರತಾಪ, ಮಂತ್ರಿ ಕುಳಿತಿರುವರು ]

ತಕ್ಷಲಿಸ – (ಹರುಷದಿಂದ) ಅದು ಸಿಂಧೂನದಿಯ ಸೇತುವೆ ಅಲ್ಲ, ಪೋರಸನ ಗೋರಿ! ಅಲೇಕ್ಸಂಡರನು ದಾಟುವದಲ್ಲ, ಇಂದ್ರನು ವಜ್ರಾಸ್ತ್ರದೊಡನೆ ಇಳಿದು ಬರುವ ಸೋಪಾನ!

ಮಂತ್ರಿ – ದೊರೆಗಳೇ, ಈ ಕಾರ್ಯಕ್ಕೆ ಇನ್ನಿಷ್ಟು ವಿಚಾರಿಸಬೇಕಿತ್ತು

ಪ್ರತಾಪ – ಮಂತ್ರಿಗಳೇ, ವಿಚಾರವಿಲ್ಲದೆ ಈ ಕಾರ್ಯ ಮಾಡಿಲ್ಲ ಮಹಾರಾಜರು. 'ಯಾರದರೆ ಕುದರಿ, ಹಾದೀ ಜಬರಿ' ಹೀಗೆ ಮಾಡುವದೇ ಮುತ್ಸದ್ದಿತನ!

ತಕ್ಷಲಿಸ.– ಮಂತ್ರೀ, ಪೋರಸನನ್ನು ಬಗ್ಗಿಸಲಿಕ್ಕೆ ಇದು ಸುಸಮಯವಲ್ಲವೇ?

ಮಂತ್ರಿ – ಅಲ್ಲ, ಸುಸಮಯವಲ್ಲ ಪರಕೀಯರು ಬಂದಾಗ ನಾವು, ನಮ್ಮ ಮಾತೃಭೂಮಿಯನ್ನು ರಕ್ಷಿಸಲಿಕ್ಕೆ ವೈರತ್ವವನ್ನು ಅನಕಾ ಬದಿಗಿರಿಸಬೇಕಿತ್ತು.

**ಪ್ರತಾಪ** – ಆ ಪೋರಸನು ಬದಿಗಿರಿಸಬೇಕಿತ್ತು ವೈರತ್ವವನ್ನು ಆತ ನೇನು ನಮ್ಮವರು-ತಮ್ಮವರು ಎಂದು, ಪ್ರಸಂಗವನ್ನು ನೋಕುವದಿಲ್ಲವಲ್ಲ!

**ಮಂತ್ರಿ** – ಪ್ರತಾಪಾ, ಹಾಗಲ್ಲ ನೀನಿನ್ನೂ ಅನನುಭವಿಕ, ವಿಚಾರಿಸು ಇನ್ನಿಷ್ಟು

**ಪ್ರತಾಪ** – ಹೌದು! ನಾನು ಅನನುಭವಿಕ, ನಿಮಗೆ ಅರವತ್ತು ಮೀರಿವೆ! ಅನುಭವಿಕರಾದ ನೀವೇನೇನು ಶತಕೀರ್ತಿ ಮಾಡಿದಿರಿ? ಪೋರಸನು, ನಮ್ಮ ನಾಡಿನಲ್ಲಿ ಪೋರನಂತೆ ಓಡಾಡಿ ಹೋಗುತ್ತಿದ್ದರೂ, ಪ್ರತಿಬಂಧಿಸುವುದಾಗಲಿಲ್ಲ—ನಿಮ್ಮ ಕೈಯಿಂದ!

**ತಕ್ಷಶಿಲ** – ಈಗ ನಾವು ಅಲೇಕ್ಸಂಡರನನ್ನು ಕೂಡಿಕೊಂಡದ್ದು ಯುಕ್ತವೇ ಆಗಿದೆ ಈಗ ಆತನ ಸೈನ್ಯವು ನದಿಯನ್ನು ದಾಟಿದ ಕೂಡಲೇ ನಮ್ಮ ಸೈನ್ಯವೂ ಕೂಡಿಕೊಳ್ಳಲಿ ಶಕ್ತಿ-ಶಕ್ತಿ ಕೂಡಿ ಮಹಾಶಕ್ತಿಯಾದಾಗಲೇ ಮಹಾಕಾರ್ಯವನ್ನು ಸಾಧಿಸಬಹುದಲ್ಲವೇ?

**ಪ್ರತಾಪ** – ಹೌದು ಮಹಾರಾಜರೇ, ನಮ್ಮ ಮಾರ್ಗವು ರಾಜಮಾರ್ಗವಾಗಿದೆ

**ಮಂತ್ರಿ** – ಮಹಾರಾಜರೇ, ಇದೊಂದು ಸಲ ಈ ಮುಪ್ಪಿನ ಮಂತ್ರಿಯ ಬಿನ್ನಹವನ್ನು ಲಕ್ಷವಿಟ್ಟು ಆಲಿಸಿರಿ ನಿಮ್ಮ ವಿಚಾರದಂತೆ ಆ ಪರಕೀಯನಿಗ ವಿಜಯವಾದರೆ, ಈ ಭಾರತ ಮಾತೆಯು ಪರವಶಳಾಗುವಳು—ಪಂಜಾಬವಷ್ಟೇ ಅಲ್ಲ! ಪೋರಸನ ಸ್ವಾತಂತ್ರ್ಯವು ನಷ್ಟವಾಗುವದಲ್ಲದೆ, ನಾವೂ ಪಾರತಂತ್ರ್ಯದಲ್ಲಿ ಬಳಲಬೇಕಾಗುತ್ತದ ಎಂದೆಂದೂ ಅನುಭವಿಸದ ಪಾರತಂತ್ರ್ಯದ ಕೆಸರಿನಲ್ಲಿ, ನಮ್ಮ ನಾಡದೇವಿಯನ್ನು ಕೈಕಾಲು ಕಟ್ಟಿ ಒಗೆದ ಘಾತಕವು, ಭಾರತದ ಧವಳ-ಇತಿಹಾಸಕ್ಕೇ ಕುಂದು ತರುತ್ತಿದೆ ಭಾರತ ಮಾತೆಯೊಮ್ಮೆ ಪಾರತಂತ್ರ್ಯಪಂಕದಲ್ಲಿ ಬಿದ್ದಳೆಂದರ, ಕಾಲಾನುಕ್ರಮದಲ್ಲಿ ಆಕೆಯ ಸಂಸ್ಕೃತಿಯ ಕುಂಕುಮವು ಅಳಿಸಿಹೋಗುತ್ತದೆ, ಧರ್ಮದ ಮಂಗಲಸೂತ್ರವು ಹರಿದು ಬೀಳುತ್ತದೆ, ಆಕೆಯ ದೇವಭಾಷೆಯ ಮೂಗುತಿಯು ಕಳಚುತ್ತದೆ! ಇಂಥ ಗತಿಗೇಡಿಯಾದ ವಿಧವೆಯ ಮಕ್ಕಳ ದುರವಸ್ಥೆಯ ಚಿತ್ರವನ್ನು, ನನ್ನಂಥವನು ಬಾಯಿಂದ ಬಣ್ಣಿಸಿ ತೋರಿಸಬಲ್ಲನೇ? ಭಾರತೀಯರ ಆಸ್ತಿ-ಪಾಸ್ತಿಗಳು ಪರಕೀಯರಿಂದ ಜಿಗಳಿಯಂತೆ ಹೀರಲ್ಪಡು

ವವು! ಬುದ್ಧಿ-ಬಲಗಳು ಬುರಸುಗಟ್ಟಿವೆವು! ಕೂಲಿಗೇಡಿ-ಕೂಳುಗೇಡಿಗಳಾಗಿ, ಪರಕೀಯರ ಗುಲಾಮರಾಗಿ ತಿರುಗುವ ಕೋಟ್ಯಂತರ ಜನರ ಗುಂಪು, ನಿಮಗೆ ಈಗಲೇ ಹೇಗೆ ಕಾಣಿಸೀತು? ದೊರೆಗಳೇ, ನಮ್ಮ ದೇಶವು ನನ್ನದೆಂದು ಅನ್ನುವಷ್ಟು ಬಾಯ ಅಧಿಕಾರವೂ ಕಳೆದುಹೋದ ಮೇಲೆ, ಶಸ್ತ್ರಾಸ್ತ್ರವಿಹೀನರಾದ ಭಾರತೀಯರಿಗೆ ಸ್ವಾತಂತ್ರ್ಯದ ದಾರಿಯೇ ಸಿಗಲಿಕ್ಕಿಲ್ಲವಲ್ಲ! ಅಂಥ ಘೋರಾಂಧಃಕಾರದಲ್ಲಿಯೂ ಒಂದು ಉಜ್ವಲ ಜೀವನವು ಪ್ರಕಾಶಿಸಿತೆಂದರೆ— ಗುಲಾಮವೃತ್ತಿಯ ಸವಿಗಂಡ ಜನತೆ ಅದನ್ನು ಪಟ್ಟನೆ ಬಡಿದು, ಆರಿಸಿ, ತಣ್ಣಗೆ ಮಾಡುವುದರಲ್ಲಿ ಸಂಶಯವೇನು? ಸ್ವಾತಂತ್ರ್ಯಾಕಾಂಕ್ಷಿಗಳು, ಅಡಿಗಡಿಗೆ ಅಡರುತ್ತಿರುವ ಎಡರುಗಳಿಗೆ-ಸಂಕಟಪರಂಪರೆಗಳಿಗೆ ಒಮ್ಮೆಯಾದರೂ ಕೈಸೋತು, ಇದು ಯಾವ ಪೂರ್ವಪೂರ್ವಜನ ಪಾಪದ ಫಲವೋ-ಎನ್ನುವ ಹಿತನುಡಿಗಳು ನಿಮಗೆ ಶಾಪವಾಗಿ ಪರಿಣಮಿಸಲಿಕ್ಕಿಲ್ಲವೇ? ಪ್ರಭುವೇ, ಇದೊಂದು ಪ್ರಸಂಗವು ತಪ್ಪಿದರೆ, ಮುಂದಿನ ಈ ಅನರ್ಥಗಳಾವವೂ ಒದಗಲಾರವೆಂದು, ನಾನು ನಿಶ್ಚಯವಾಗಿ ಹೇಳಬಲ್ಲೆನು ಇನ್ನೇನು? ಪಂಜಾಬದ ಸ್ವಾತಂತ್ರ್ಯಕಿಲ್ಲೆಗೆ ಛಿದ್ರಬೀಳಗೊಡಬೇಡಿ! ಅದರಲ್ಲೊಮ್ಮೆ ಪಾರತಂತ್ರ್ಯ ಸರ್ಪವು ಮನೆಮಾಡಿಕೊಂಡಿತೆಂದರೆ ಯಾವ ಮಂತ್ರ-ತಂತ್ರಗಳ ಆಟವೂ ನಡೆಯದು! ಗಿಡಮೂಲಿಕೆಗಳಂತೂ ಕಸಕಡ್ಡಿ! ಸರ್ಪಯಜ್ಞವು ಪ್ರಯೋಜನವಾಗಲಿಕ್ಕಿಲ್ಲ ಆದರೆ ಜಗತ್ಪ್ರಳಯವಾಗುವವರೆಗೆ ಭಾರತೀಯರು, ಚಿಟುಕು ಮುರಿಯುತ್ತ ಕುಳ್ಳಿರುವ ಪ್ರಸಂಗ ಮಾತ್ರ ಬರುತ್ತದೆ ಅದನ್ನು ತರಗೊಡಬಾರದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ

ತಕ್ಷಶಿಲ – ಮಾತುಕೊಟ್ಟಿದ್ದೇನಲ್ಲಾ – ಹೇಗೆ ಮಾಡುವುದಿನ್ನು?

ಪ್ರತಾಪ – ಮಾತು ಮುರಿದರೆ, ಆ ಚಕ್ರವರ್ತಿಯ ಕುತ್ತಿಗೆ ಕೊಯ್ದಂತಾಗುತ್ತದೆ ಭಾರತೀಯ ರಾಜರು ಅವಿಶ್ವಾಸಿಕರೆಂದು, ಗ್ರೀಸ ದೇಶದ ವರೆಗೆ ತೆಗಳುತ್ತ ಹೋಗಲಿಕ್ಕಿಲ್ಲವೇ ಆತನು?

ತಕ್ಷಶಿಲ – ಕೊಟ್ಟ ವಚನಕ್ಕೆ ಭಂಗ ಬರಲಾಗದು ಒಕ್ಕಟ್ಟನ್ನು ಸಾಧಿಸುವ ವಿಚಾರ—ಯುದ್ಧ ಮುಗಿದ ಮೇಲೆ!

ಮಂತ್ರಿ – ಮಹಾರಾಜ, ಮನೆಯ ಕದನ ಮನೆಯಲ್ಲಿರಲಿ ಪರ

ಕೀಯರನ್ನು ಹೊಡೆದೋಡಿಸಿ, ಭಾರತಮಾತೆಯ ಮಾಂಗಲ್ಯವನ್ನು ಕಾಯ್ದುಕೊಳ್ಳೋಣ

ಪ್ರತಾಪ – ಮಹಾರಾಜರೇ, ಉಳಿದ ಉದ್ದೇಶಗಳ ವಿಚಾರವು ನಮಗೀಗ ಬೇಡ ಪೋರಸನೇ ನಮ್ಮ ಮುಖ್ಯ ವೈರಿ! ಪಾಪ! ಪರಕೀಯ ನೊಡನೆ ನಮ್ಮ ಹಗೆತನವೇಕೆ? ಈ ವೃದ್ಧ ಮಂತ್ರಿಗಳ ಮಾತು ಕೇಳುತ್ತ ನಿಂತರೆ, ಹುಚ್ಚು ಹಿಡಿಯಬಹುದು

ತಕ್ಷಶಿಲ – ಹೌದು! ಈಗ ಪೃಚ್ಛಾ-ಪೃಚ್ಛೆ ಮಾಡುತ್ತ ಕುಳ್ಳಿರುವ ಸಮಯವಿದಲ್ಲ ಮಂತ್ರೀ, ನಾಳೆಯೇ ಸೈನ್ಯವು ಸಿದ್ಧವಾಗಿ, ಸೇತುವೆಯ ಕಡೆಗೆ ಸಾಗುವಂತೆ ವ್ಯವಸ್ಥೆಯಿಡಿಸು

ಮಂತ್ರಿ – ದೊರೆಗಳೇ, ಮುಪ್ಪಿನಕಾಲಕ್ಕೆ ನನ್ನ ಕೈಯಿಂದ ಇಂಥ ದೇಶದ್ರೋಹದ ಕೃತ್ಯವನ್ನು ಮಾಡಿಸಬೇಡಿ

ಪ್ರತಾಪ – ಇದು ದೇಶದ್ರೋಹದ ಕಾರ್ಯವೇ?

ತಕ್ಷಶಿಲ – ದೇಶದ್ರೋಹದ ಕಾರ್ಯವೆನ್ನುವುದು, ರಾಜದ್ರೋಹ ವಾಗುತ್ತದೆ!

ಮಂತ್ರಿ – ರಾಜದ್ರೋಹವೆಂತು?

ತಕ್ಷಶಿಲ – ನನ್ನಾಜ್ಞೆಯನ್ನು ಉಲ್ಲಂಘಿಸುವ ವಿಚಾರವು, ರಾಜ ದ್ರೋಹವೇ

ಮಂತ್ರಿ – ರಾಜದ್ರೋಹವನ್ನು ನಾನೆಂದಿಗೂ ಮಾಡಲಾರೆ ಅದ ರಂತೆ ದೇಶದ್ರೋಹವನ್ನೂ ಮಾಡಲಾರೆ, ಪ್ರಾಣ ಹೋದರೂ!

ತಕ್ಷಶಿಲ – ನನ್ನಾಜ್ಞೆಯನ್ನನುಸರಿಸು!

ಮಂತ್ರಿ – ಅದು ದೇಶದ್ರೋಹ ಸ್ವಾಮೀ!

ತಕ್ಷಶಿಲ – ಅಲ್ಲ, ರಾಜದ್ರೋಹೀ! ಪ್ರತಾಪಾ, ಈತನನ್ನು ಇಂಥ ಯುದ್ಧ ಪ್ರಸಂಗದಲ್ಲಿ ಹೀಗ ಬಿಟ್ಟರ ಅನರ್ಥವಾದೀತು, ಯುದ್ಧ ಮುಗಿ ಯುವ ವರೆಗೆ ತುರಂಗದಲ್ಲಿರಿಸಬೇಕು

ಮಂತ್ರಿ – ಅಗತ್ಯವಾಗಿ ಬರಲಿ ಮಹಾರಾಜರೇ, ತುರಂಗವಾಸವು ಪರಕೀಯರಲ್ಲಿ ಗುಲಾಮನಾಗಿ ಬಾಳುವದಕ್ಕಿಂತ, ತನ್ನ ದೇಶದ ತುರಂಗ

ದಲ್ಲಿ ದೇಶಹಿತದ ಸತ್ಯಾಗ್ರಹಕ್ಕಾಗಿ, ಏಳೇಳು ಜನ್ಮಕಳೆಯಬಹುದು ಅದು ತುರಂಗವೇ? ಅಲ್ಲ, ಶ್ರೀಕೃಷ್ಣಪರಮಾತ್ಮನ ಜನ್ಮಸ್ಥಳ! ನನಗದು ತಪೋವನ!

ತಕ್ಷಲಿಸ – ವೃದ್ಧ ಋಷಿಗಳೇ, ನೀವಿನ್ನು ರಾಜಧಾನಿಯಲ್ಲಿದ್ದರೆ ಹುಚ್ಚುಹಿಡಿಯಬಹುದು ಬೇಗನೆ ತಪೋವನದ ಮಾರ್ಗ ಹಿಡಿಯಿರಿ

ಮಂತ್ರಿ – ದೊರೆಗಳೇ, ನನಗೆ ಸಾಕು ಈ ಜೀವನವು ಪಾಪಿ ಕಣ್ಣುಗಳಿಂದ ಪರತಂತ್ರ–ಭಾರತಮಾತೆಯನ್ನು ನೋಡಲಾರೆ ಇಗೊಳ್ಳಿರಿ ಈ ಕತ್ತಿಯನ್ನು! ಬೇಗನೆ ನನ್ನ ಕುತ್ತಿಗೆಯನ್ನು ತುಂಡರಿಸಿರಿ, ಆ ಜಗನ್ನಿಯಾಮಕನಲ್ಲಾದರೂ ಅರಿಕೆ ಮಾಡಿಕೊಳ್ಳುತ್ತೇನೆ ಭಾರತಮಾತೆ ಯನ್ನು ಪಾರತಂತ್ರ್ಯದಲ್ಲಿ ಕೆಡುಹಬೇಡವೆಂದು!

ತಕ್ಷಲಿಸ – ಹೇಗಾದರೂ ಜಗನ್ನಿಯಾಮಕನ ಸಹಾಯವಿದ್ದರೆ, ಇಂದೇ ಸಾಯುವ ಕಾರಣವೇನು? ತುರಂಗದಲ್ಲೇ ಬಂದಾಗ ಬರಲಿ ಮರಣ!

ಮಂತ್ರಿ – ಮಹಾರಾಜ, ದೇಶದ್ರೋಹವೆಂದು, ತುರಂಗಕ್ಕಟ್ಟುವುದು ಶುಭಲಕ್ಷಣವಲ್ಲ! ದೇಶಸೇವಕನಾದ ನನ್ನ ಬಂಧನವೆಂದರೆ, ದೇಶದೇವಿಗೂ ಬಂಧನವಾದಂತೆಯೇ

ತಕ್ಷಲಿಸ – ಮಂತ್ರೀ, ಸಾಕು ಮಾಡು ಎಲೋ ಅಲ್ಲಿ ಯಾರು?

ಸೈನಿಕರು – (ಬಂದೆರಗಿ) ದೊರೆಗಳಾಜ್ಞೆ

ತಕ್ಷಲಿಸ – ಈತನನ್ನು ಬಂಧಿಸಿರಿ ಏಕೆ? ವಿಚಾರವೇಕೆ? ರಾಜ ದ್ರೋಹಿ! ನಾಳಿನ ವಿಜಯಲಕ್ಷ್ಮಿಯನ್ನು ತಡೆಹಾಕಲು ನಿಂತ ಮೂಳ ನನ್ನು ಬಂಧಿಸಿರಿ

ಪ್ರತಾಪ – ದೊರೆಗಳೇ, ಕೊಂಚ ಶಾಂತರಾಗಿರಿ ಇಷ್ಟು ದಿವಸ ಸ್ವಾಮಿಸೇವೆಮಾಡಿದ ಈ ಮಂತ್ರಿಗಳಿಗೆ ಇದೊಮ್ಮೆ ಕ್ಷಮಿಸಿರಿ ಮಂತ್ರಿ ಗಳೇ, ಇನ್ನು ಬೇಗನೆ ಕ್ಷಮೆ ಬೇಡಿಕೊಳ್ಳಿರಿ

ಮಂತ್ರಿ – ಕ್ಷಮೆ ಬೇಡ ನನಗೆ ದೇಶದ್ರೋಹಿಗೆ ಕ್ಷಮೆಯನ್ನು ಯಾಚಿಸಲಾ? ಮರಣದಂಡನೆ ಕೊಟ್ಟರೂ, ಈ ದೇಶದ್ರೋಹಿಗೆ ಮಣಿಯಲಾರೆ ಸತ್ಯದ ಹೊರತು ನಾನು, ಮತ್ತಾರಲ್ಲೂ ತಲೆಬಗ್ಗಿಸ ಲಾರೆನು

ತಕ್ಷಲಿಸ – (ಸಿಟ್ಟಿನಿಂದ) ತಡಮಾಡಕೂಡದು! ಹೋಗಿರಿ ಬಂಧಿಸಿಕೊಂಡು! ನಾಳೆಯೇ ರಣಗಾಳಿ ಬೀಸುವುದು—ಎಲ್ಲಾ ಸೈನಿಕರ ವೀರಶಕ್ತಿಗಳೆಲ್ಲ ಝಳಪಿಸಲಿ!

ಮಂತ್ರಿ – (ಕಟ್ಟಿಕೊಂಡು ಹೋಗುವಾಗ) ದೇಶದ್ರೋಹೀ, ಅನುಕೂಲ ಪರಿಸ್ಥಿತಿಯೊದಗಿದರೆ ಇದೋ ನನ್ನಂತೆ ನಿನ್ನನ್ನೂ ಬಂಧಿಸುತ್ತೇನೆ ಆಗ ದೇಶದ್ರೋಹಿಯನ್ನು ಕ್ಷಮಿಸೆಂದೀ! (ಹೋಗುವನು)

ತಕ್ಷಲಿಸ – ಪ್ರತಾಪಾ, ಇನ್ನು ನೀನೇ ಮಂತ್ರಿ ಅಲೇಕ್ಸಂಡರ ಚಕ್ರವರ್ತಿಗೆ ಆಹಾರಾದಿಗಳು, ಹದಿನೈದು ಸಾವಿರ ಸೈನ್ಯ ಇಷ್ಟೆಲ್ಲ ಸಹಾಯಗಳು ಯೋಗ್ಯ ವೇಳೆಗೆ ಮುಟ್ಟಲಿ ಇದೊಂದೇ ಪ್ರಸಂಗ ನೋಡು! ಮುಂದೆ ಸುಖವಾಗಿರೋಣವಂತೆ!

ಸೇವಕ – (ಮಣಿದು) ದೊರೆಗಳೇ, ಪಡುವಣ ನಾಡಿನ ದಂಡಿನವರು, ಸಿಂಧುನದಿಯನ್ನು ಮೊನ್ನೇ ದಾಟಿದ್ದಾರಂತೆ! ಮುಂದಕ್ಕೆ ಸಾಗಿ ಹೋಗುತ್ತಿರುವಾಗ ಪೋರಸನ ಸೈನ್ಯವು ನಿನ್ನೇ ಇದಿರಾಯಿತಂತೆ! ಝೇಲಂ ನದಿಯ ದಂಡೆಯಲ್ಲಿ ಉಭಯರಿಗೂ ತುಮುಲಯುದ್ಧವಂತೆ

ತಕ್ಷಲಿಸ – ಮಂತ್ರಿ, ಇಂದಿನ ರಾತ್ರಿಯೇ ಸೈನ್ಯ ಹೊರಡಲಿ ನಾಳೆಯೇ ಆ ಚಕ್ರವರ್ತಿಗ ಕೂಡಿಕೊಳ್ಳಲಿ

ಪ್ರತಾಪ – ಇಷ್ಟೆಲ್ಲ ಕೆಲಸವನ್ನು ಕಣ್ಣುಬಡೆಯುವುದರೊಳಗಾಗಿ ಮುಗಿಸುತ್ತೇನೆ

(ಹೋಗುವರು)

## ೬ ನೇ ನೋಟ—ರಾಜಬೀದಿ

[ಯುದ್ಧಕ್ಕೆ ಸಿದ್ಧರಾದ ಪೋರಸ, ರಣಧೀರರು ಬರುವರು.]

ರಣಧೀರ – ಮಹಾರಾಜ, ತಕ್ಷಲಿಸನು ವೈರಿಗಳನ್ನು ಕೂಡಿರದಿದ್ದರೆ, ಯುದ್ಧದ ಮಾತು ಇಷ್ಟು ಹೊತ್ತಿಗೆ ಹಳೆಕತೆಯಾಗುತ್ತಿತ್ತು!

ಪೋರಸ – ಧೀರಾ, ಆದದ್ದಲ್ಲಾ ಒಳಿತೇ! ಒಂದು ಕಲ್ಲೊಗೆದು ಎರಡು ಹಣ್ಣು ಕೆಡವಿದಂತಾಗಲಿ!

ರಣಧೀರ – ದೊರೆಗಳೇ, ಏನು ಹೇಳಲಿ, ನಿನ್ನಿನ ಸಮರ ಸಂಗತಿಯನ್ನು! ನಮ್ಮ ಸೈನ್ಯವು, ಬಿಳಿಯರ ಸೈನ್ಯದ ಮೇಲೇರಿ ಹೋಗುತ್ತಿರು

ವಾಗ, ಸಮುದ್ರವು ಉಕ್ಕೇರಿ ಧಡದಲ್ಲಿಯ ಬಿಳಿ ಮಳಲನ್ನು ಮುಚ್ಚಿ ಬಿಡುವಂತೆ ಕಾಣಿಸಿತು ಅಲೇಕ್ಸಂಡರನು ನಿಂತು ಧೈರ್ಯಕೊಡದಿದ್ದರ, ಬಿಳಿಸೈನ್ಯವು ಬೆನ್ನು ತೋರಿಸುತ್ತಿತ್ತು!

ಪೋರಸ – ಧೀರಾ, ಹೇಗಾದರೂ ಹಣ್ಣಿಗೆ ಬಂದ ಸಮಯ! (ಕತ್ತಿಯನ್ನು ತೋರಿಸಿ) ಇಗೋ, ಈ ನನ್ನ ಸಮರಸಿಂಹನು ಹಣ್ಣಿಗೆ ಬಂದ ಬಿಳಿಯರನ್ನು ಹೋಳಿಹೋಳಿ ಹಾಕುವದಕ್ಕೆ ಮಡಿಯಿಂದ ಬಂದಿದ್ದಾನೆ ನೋಡು ಎಷ್ಟು ಹೊಳವು!

ರಣಧೀರ – ಅದು ಅಖಿಳ ಪಂಜಾಬದ ಕೀರ್ತಿಯ ಹೊಳವು! ಭಾರತ ಮಾತೆಯ ಮಾಂಗಲ್ಯ ಮೂಗುತಿಯ ಮೆರುಗು!

ಪೋರಸ – (ಕಿವಿಗೊಟ್ಟು) ಧೀರಾ, ಕೇಳು—ರಣಭೇರಿ! ನಮ್ಮ ಕೂಗಿತು ಕೇಳಿದೊ ರಣಭೇರಿ!! ಧೀರಾ, ಹೂಂ ಭಾರತ ಮಾತಾಕೀ ಜೈ! ಭಾರತ ಮಾತಾಕೀ ಜೈ! (ಎಂದು ಜಿಗಿಯುತ್ತ ಹೋಗುವರು)

## ೭ ನೇ ನೋಟ—ರಣರಂಗ

(ಸೈನ್ಯದಿಂದ ಸುತ್ತಲ್ಪಟ್ಟ ಪೋರಸ—ಮುಂದೆ ಅಲೇಕ್ಸಂಡರ)

ಅಲೇಕ್ಸಂಡರ – ಅಪಜಯವನ್ನೊಪ್ಪಿಕೊಂಡು ಶಸ್ತ್ರವನ್ನೊಪ್ಪಿಸು

ಪೋರಸ – ಅಪಜಯವನ್ನೊಪ್ಪಿಕೊಳ್ಳಲಿಯಾ? ಪೋರಸನು ಮೃತನಾದನೇ? ಅವನ ಸೈನ್ಯವೆಲ್ಲ ನೆಲ ಹಿಡಿದರೇನಾಯ್ತು–ಈ ನನ್ನ ಸಮರಸಿಂಹನು ಆನೆಗಂಜುವನೇ? ಆನೆ ಬಿಳಿಯಿದ್ದರೇನಾಯಿತು ಈ ಕತ್ತಿಯಿಂದ ವಿಜಯಶ್ರೀಯನ್ನು ಒಲಿಸಿಕೊಳ್ಳತಕ್ಕ ಒಂಥುರ ಬಾಹುಗಳು ಸ್ಫುರಣ ಹೊಂದುತ್ತಿರುವಾಗ ನಿನಗೆ ಮಣಿಯಲಾ?

ಅಲೇಕ್ಸಂಡರ – ನಿನ್ನ ಶೂರತನಕ್ಕೆ ಮೆಚ್ಚಿದೆ ನಿನ್ನ ರಾಜ್ಯ ಕೂಡ ನಿನಗೇ ಇರಲಿ ಶಸ್ತ್ರವೊಪ್ಪಿಸು

ಪೋರಸ – ಆಗದಾಗದು! ನಿನ್ನಂಥ 'ತ್ರೈಲೋಕ್ಯವೀರ' ನು ರಣಹೇಡಿಯಂತೆ ಮಾತಾಡುವರೇ? ಬೇಕಾದರೆ ಈ ಕತ್ತಿಯನ್ನು ರಣದೇವಿಯು ಕಸುಗೊಳ್ಳಲಿ ಶಕ್ಯವಿದ್ದರೆ ನೀನು ಕಸುಕೋ!

ಅಲೇಕ್ಸಂಡರ – ಗ್ರೀಸ ದೇಶದಿಂದ ಹೊರಟು ಅನೇಕ ದೇಶಗಳಲ್ಲಿ ವಿಜಯ ಹೊಂದಿರುವೆನಾದರೂ ನಿನ್ನಂಥ ವೀರಧೀರರನ್ನು ಕಾಣಲಿಲ್ಲ! ನಿನ್ನ

ಸೈನ್ಯ ಹಾಳಾಗಿದೆ ಯುದ್ಧಮಾಡುವ ಶಕ್ತಿ ಕುಂದಿದೆ ನೀನೊಬ್ಬನೇ ಏನು ಮಾಡುವಿ? ಕತ್ತಿ ಒಪ್ಪಿಸು

**ಪೋರಸ** – ಅದೊಂದು ಮಾತು ಬಿಟ್ಟು ಮಾತಾಡು

**ತಕ್ಷಲಿಸ** – (ಬಂದು) ತ್ರೈಲೋಕ್ಯವೀರ ಅಲೇಕ್ಸಂಡರ ಚಕ್ರವರ್ತಿಗಳಿಗೆ ವಿಜಯವಾಗಲಿ (ವಣಿಯುವನು)

**ಅಲೇಕ್ಸಂಡರ** – ಮಿತ್ರಾ, ದಂಡಿನಲ್ಲೆಲ್ಲಾ ಶಾಂತತೆ ಆಯ್ತೆ?

**ತಕ್ಷಲಿಸ** – ಅಷ್ಟು ಮಾಡಿ ಇದೇ ರಣಭೂಮಿಯಿಂದ ಬಂದೆ

**ಪೋರಸ** – ಇಂಥ ಬಂಧುದ್ರೋಹಿಗಳನ್ನು ಬಗಲಲ್ಲಿ ಬಡಕೊಂಡು ದಿಗ್ವಿಜಯಕ್ಕೆ ಹೊರಟಿರುವೆಯಾ? ಈ ಬಂಧುಘಾತಕನು ನಿನ್ನ ಮಿತ್ರನೇ? ಎಲ್ಲಾ ಹಾಳಾಗಲಿ, ಇವನೊಬ್ಬ ಸಮರಸಿಂಹ (ಕತ್ತಿಯನ್ನು ಮುದ್ದಿಡುತ್ತ) ನಿದ್ದರೆ ಸಾಕು ನನಗೆ ಊದು ರಣಗಾಳಿಯನ್ನು! ಉಳಿದ ನನ್ನೊಬ್ಬ ನನ್ನು ವೀರಸ್ವರ್ಗಕ್ಕೆ ಮುಟ್ಟಿಸು ದೊರೆತರೆ ವಿಜಯ! ಇಲ್ಲವೆ ವೀರಸ್ವರ್ಗ! ಪರಧರ್ಮೀಯರ ಕೈವಶವಾಗುವುದು ನನಗೆ ಬೇಡ!

**ಅಲೇಕ್ಸಂಡರ** – ಪೋರಸಾ, ನಿನ್ನ ಸ್ವಾಭಿಮಾನಜ್ಯೋತಿಗೆ ನನ್ನ ಕಣ್ಣು ಕುಕ್ಕಿದವು! ನಿನ್ನ ಶೌರ್ಯದ ಬಿರುಗಾಳಿಗೆ ನನ್ನೆದಯು ನಡುಗಿತು! ನಿನ್ನ ಬಿಂಕದ ಬಿರಿನುಡಿಗುಂಡುಗಳಿಂದ ನನ್ನ ಧೈರ್ಯಮೇರುವೆ ಹುಡಿಯಾಗಿ ಹಾರಿತು! ನನ್ನಂಥ ತ್ರೈಲೋಕ್ಯ ವೀರನಿಗೆ ನೀನೇ ತಕ್ಕ ಮಿತ್ರ! ಮಿತ್ರಾ, ಹೊಸಮಿತ್ರತ್ವಕ್ಕಾಗಿಯಾದರೂ ನಿನ್ನ ಕತ್ತಿಯನ್ನು ನನಗೆ ಸಲಿಸಲಾರೆಯಾ?

**ಪೋರಸ** – (ರೋಮಾಂಚಗಳೆದ್ದು) ಚಕ್ರವರ್ತಿ, ಮಿತ್ರನೆಂದು ಸಂಬೋಧಿಸಲಿಕ್ಕೆ ನನ್ನ ನಾಲಗೆಯೇಳವೊಲ್ಲದು ಇಂಥ ದುರಭಿಮಾನಿಯಾದ ನಾಲಗೆಯನ್ನು ಇಗೋ ಈ ಕತ್ತಿಯಿಂದ ತುಂಡರಿಸು! ಮಿತ್ರತ್ವಕ್ಕೆ ವಿಘ್ನವನ್ನುಂಟು ಮಾಡುತ್ತಿರುವ ಈ ಕುಹಕನನ್ನು ಕಿತ್ತಿ ಒಗೆ! (ಕತ್ತಿ ಕೊಡುವನು)

**ಅಲೇಕ್ಸಂಡರ** – (ಅಪ್ಪಿಕೊಂಡು) ಮಿತ್ರಾ, ಸ್ವಾಭಿಮಾನಮೂರ್ತಿ, ಭಾರತಕೀರ್ತಿ, ಸಮರಶೂರಾ, ನಮ್ಮ ಮಿತ್ರತ್ವವು, ಈ ಕತ್ತಿಯ ಶಾಶ್ವತ ಕೀರ್ತಿಯಂತೆ ವೃದ್ಧಿವಾಗಲಿ!

**ಮಂತ್ರಿ** – (ಸೆರೆಮನೆಯಿಂದ ಬಂದು) ಚಕ್ರವರ್ತೀ, ಶೂರರಿಗೆ ತಕ್ಕ

ಸನ್ಮಾನವನ್ನು ಶೂರರು ಮಾಡುವರು, ಈ ನಮ್ಮ ತಕ್ಷಲಿಸದೊರೆಗಳಿಗೆ ಯಾವ ಸನ್ಮಾನ?

ತಕ್ಷಲಿಸ – (ರೌಸಿನಿಂದ) ನೀನು ಇಲ್ಲಿಗೆ ಹೇಗೆ ಬಂದಿ?

ಮಂತ್ರಿ – ಏಕೆ? ಯುದ್ಧ ಮುಗಿಯುವವರೆಗಷ್ಟೇ ಕಾರಾಗೃಹ ವಲ್ಲವೇ?

ಅಲೇಕ್ಸಂಡರ – ತಕ್ಷಲಿಸ, ನಿನ್ನಿಂದ ಬಹು ಉಪಕೃತನಾದೆನು ಆದರೂ ನಿನ್ನ ಕೃತಿಯು, ದೇಶಾಭಿಮಾನಿಯಾದ ನನಗೆ ಮಾನ್ಯವಿಲ್ಲ! ನಿನ್ನ ದೇಶಬಂಧುವಾದ ಪೋರಸನನ್ನು ಘಾತಿಸುವ ಬುದ್ಧಿಯು, ರಾಕ್ಷಸೀ ವೃತ್ತಿಯೇ! ನೀನು ದೇಶದ್ರೋಹಿ! ನಮ್ಮ ದೇಶದಲ್ಲಿ ಇಂಥ ಅಪರಾಧಕ್ಕೆ ಕ್ಷಮೆಯೆ ಇಲ್ಲ ನಿನ್ನ ಮಿತ್ರತ್ವವು ವಿಶ್ವಸನೀಯವಲ್ಲ ಸ್ವಾರ್ಥಸಾಧನೆಗಾಗಿ, ಸ್ವದೇಶವನ್ನು ಕೂಡ ವೈರಿಗಳ ವಶಕ್ಕೆ ಕೊಡಲಿಕ್ಕೆ ಹೇಸದ ನೀನು, ನನ್ನಂಥ ಪರಕೀಯನೊಡನೆ ಮಿತ್ರತ್ವದಿಂದ ನಡೆಯಬಹುದೇ? ಇರಲಿ ನೀನು ಈಗ ಗ್ರೀಸ ಸಾಮ್ರಾಜ್ಯದ ಮಾಂಡಲಿಕನು! ಇನ್ನು ಮೇಲೆ ಸ್ವಾಭಿಮಾನಿಯಾದ ಪೋರಸನೊಡನೆ ಮಿತ್ರತ್ವದಿಂದ ನಡಕೊಳ್ಳತಕ್ಕದ್ದು! ತಿಳಿಯಿತೇ?

ತಕ್ಷಲಿಸ – (ಮುಖತಗ್ಗಿಸಿ) ದೊರೆಗಳಿಷ್ಟ

ಮಂತ್ರಿ – ತಕ್ಷಲಿಸ ದೊರೆಗಳೇ, ಈಗಾದರೂ ಅಕ್ಕಸಾಲಿಯು ಕಿವಿ ಚುಚ್ಚಿದಂತಾಯಿತೇ? ದೇಶಕ್ಕೆ ಪಾರತಂತ್ರ್ಯವಂತೂ ಬಂತು! ಛೀ ಛೀ! ಮುಪ್ಪಿನ ಕಾಲಕ್ಕೆ ಇದೆಂಥ ದೃಶ್ಯ?

ಅಲೇಕ್ಸಂಡರ – ತಕ್ಷಲಿಸಾ, ನಮ್ಮಂಥ ಪರಕೀಯರು ದಾಳಿ ಮಾಡಿದಾಗ, ಒಳಜಗಳವನ್ನು ಮರೆತು, ದೇಶೀಯ ರಾಜರು ಒಂದಾಗಿ ಪರಕೀಯರನ್ನು ಓಡಿಸಬೇಕು ಅಂದರೆ ದೇಶಕ್ಕೆ ಮಂಗಳ!

ಮಂತ್ರಿ – (ಮನಸಿನಲ್ಲಿ) ಮೋರೆ ತಗ್ಗಿಸಿಕೊಂಡು, ಪಿಟ್ಟೆನ್ನದೆ, ಹೇಳಿದ್ದಕ್ಕೆ ಹೂಂ ಅನ್ನುವ ಹೇಡಿಯೇ, ಮೊದಲೇ ಪೋರಸನನ್ನು ಕೂಡಿಕೊಂಡಿದ್ದರೆ? ದೇಶದ್ರೋಹಿ! ಕೀರ್ತಿ ಬರೆಯಿತು ಇತಿಹಾಸದಲ್ಲಿ ಈ ಮೊದಲನೇ ದೇಶದ್ರೋಹಿಯ ಹೇಸಿ ಚರಿತ್ರ!!



# ಯಾರೂ ಇಲ್ಲ!

## ಒಂದು ದೃಶ್ಯ



(ಊರಿನಿಂದ ಅನತಿ ದೂರದಲ್ಲಿರುವ ಮೋಟಾರ ಸ್ಟ್ಯಾಂಡಿಗೆ ಹೋಗುವ ದಾರಿಯಲ್ಲಿ «ಒಬ್ಬಾಕೆ» ಕುಳಿತುಕೊಂಡಿರುವಳು ಆ ದಾರಿಯಿಂದ ಮೋಟಾರಿಗೆ ಹೋಗುವವರೂ ಮೋಟಾರಿನಿಂದ ಬರುವವರೂ ಸಾಗಿದ್ದಾರೆ ಹೊಲದ ಕೆಲಸಕ್ಕೆ ಹೋಗುವ ಹೆಣ್ಣಾಳು ಗಂಡಾಳುಗಳೂ ದನಗಾಹಿಗಳೂ ಹೊರಟಿದ್ದಾರೆ )

ಒಬ್ಬಾಕೆ,– ಬೇಡಿ ಬಂದಿಲ್ಲೋ ಶಿವ ಸಾಂಬನ ಹಂತೀಲೀ।
ಮಾಡಿ ನೀಡಿಲ್ಲೊ ಗುರು ಹರಮುನಿ ಹಣಿಯಲೀ॥

(ಎಂಬ ಚುಟಿಕೆಯನ್ನು ತಿರುತಿರುಗಿ ಹಾಡುತ್ತಿದ್ದಾಳೆ ಎತ್ತು ಒಟ್ಟುಕೊಂಡು ಸಾಗಿದ ಇಬ್ಬರು ಬರುತ್ತಾರೆ )

ಒಬ್ಬ – ಹೌದು ನೋಡು ಕಾಕಾ! ನೀನು ಹೇಳಿದಂತೆ ಈ ವರುಷ ರೋಹಿಣಿ ಮಳೆ ಸುರುವಾಗಿದ್ದರಿಂದ ನಾವು ಇನ್ನು ಗೆದ್ದಂತೆಯೇ ಸೈ

ಕಾಕಾ – ನಾನು ಮೊದಲೇ ಹೇಳಿಲ್ಲವೇ—ನೀನು ಗೆದ್ದಿಯೆಂದು

ಒಬ್ಬ – ಈ ದನಗಳಿಗೆ ತುಟ್ಟಿಯ ಮೇವು ಕೊಂಡು ಹಾಕಿ ಹಾಕಿ ನಮ್ಮ ಕೈ ಸೋತುಹೋಗಿವೆ ಅವುಗಳ ಕಾಲಲ್ಲಿ ನಾವು ಸತ್ತೆವು ಅವುಗಳನ್ನು ಬದುಕಿಸಿದೆವು

ಕಾಕಾ – ಈ ಬಾರಿ ನಿನಗೆ ಸುಖ ಸಿಗುತ್ತದೆ ಹೊಡಿ ಇನ್ನು ಗಾಡಿ
ಕುಂಟೋಜಿ ಬಸವಣ್ಣ। ಎಂಟಾಕಳ ಹಾಲ ಕುಡಿದು।
ಮುಂಟಿಪದಾಗ ಮಲಗ್ಯಾನೋ॥

ಅನುವ್ಹಾಂಗ ನಿನ್ನ ಹುಡುಕುತ್ತ ಬರುತ್ತದೆ ಸುಕಾಲ ತಿಳೀತಿಲ್ಲೋ?

ಒಬ್ಬ – ನಿನ್ನ ಬಾಯಿಹರಕೆಯಿಂದ ಬೆಳೆ ಬರುವ ತನಕ ಹೆಂಡರು ಮಕ್ಕಳನ್ನು ಕಟ್ಟಿಕೊಂಡು ನಾನು ಬದುಕಿ ಉಳಿಯಬೇಕು ಕಾಕಾ

(ಆ ಒಬ್ಬಾಕೆಯನ್ನು ನೋಡಿ) ಅಗಾ, ಕಾಕಾ ಅಲ್ಲಿ ನೋಡಿ, ಸಿದ್ದವ್ವಜ್ಜಿ ಕೂತಿದ್ದಾಳೆ

ಕಾಕಾ – ಆಕೆಯನ್ನು ತೆಗೆದುಕೊಂಡು ಏನು ಮಾಡುತ್ತೀ, ಆಕೆಯ ಉದ್ಯೋಗವೇ ಅದು

ಒಬ್ಬ – (ಆಕೆಯನ್ನು ಕುರಿತು) ಏನಜ್ಜೀ, ಇಲ್ಲಿ ಕುಳಿತೀ ?

ಒಬ್ಬಾಕೆ - (ಹಾಡು ನಿಲ್ಲಿಸಿ) ಆಂ ! ಇಲ್ಲಿ ಕುಳಿತೀ ಅಜ್ಜೀ ಅಂತ ಕೇಳುತ್ತೀ. ಮತ್ತೆಲ್ಲಿ ಕುಳ್ಳಿರಲಿ ? ನನ್ನನ್ನು ಮಣ್ಣು ಸಹ ಕರಕೊಳ್ಳಲೊಲ್ಲದು !

ಕಾಕಾ – ಸಿಕ್ಕಿತಿಲ್ಲೊ ನಿನಗೆ ಉತ್ತರ?

ಒಬ್ಬ – ಸಾಕಾದಷ್ಟು ಸಿಕ್ಕಿತು

(ಮುಂದಕ್ಕೆ ಹೋಗವರು )

ಒಬ್ಬಾಕೆ – ಬಂದವರೆಲ್ಲರೂ ಇದೇ ಕೇಳುತ್ತಾರೆ 'ಇಲ್ಲಿ ಕುಳಿತಿ' ಅಂತ ! ಹೋಗಿ ಸೇರಲಿಕ್ಕೆ ನನಗೆ ಸುಡುಗಾಡು ಇದ್ದರೆ ನಾನೇಕೆ ಇಲ್ಲಿ ಸಿಡೀತಿದ್ದೆ ? ಡೌಲಿನಿಂದ ಮಾತಾಡಿಸುತ್ತವೆ ನಾನು ಹೇಳುವುದನ್ನು ಕಿವಿಯಲ್ಲಿ ಹಾಕಿಕೊಳ್ಳದೆ ಸೆಟೆದು ಹೋಗುತ್ತವೆ ಯಾಕೋ ? ಹಾಂಗೇ ನಡೆದಿ ? ಹೇಳಲ್ಲಾ ನನಗೆ ಉತ್ತರ ?

ಒಬ್ಬ – (ಹೊರಳಿನಿಂತು) ಏನಜ್ಜೀ ?

ಕಾಕಾ – ಎಲೋ. ಕೆಲಸಗೇಡೀ ! ನಡೆ ಆಕೆಗೇನು ಕೆಲಸ ? ಹಾಯಾಗಿ ಮನೆಯಲ್ಲಿ ಕುಳಿತು ಉಣ್ಣುವುದನ್ನು ಬಿಟ್ಟು ಪರದೇಶಿಯಂತೆ ಎಲ್ಲಿಯಾದರೂ ಕುಳಿತುಕೊಂಡಿರುತ್ತಾಳೆ

(ಎಂದು ಮಾತಾಡುತ್ತ ಮುಂದೆ ಸಾಗುವರು )

ಒಬ್ಬಾಕೆ – ಹೆಸರಿಲ್ಲದೆ ದೆಸೆಯಿಲ್ಲದೆ ನನಗೆ ಪರದೇಶಿಯೆಂದು ಬಂಯ್ದು ಹೋದನಲ್ಲ ಈ ಮುದುವಾ ! ಯಾರಿದ್ದಾರೆ ನನ್ನ ಬೆನ್ನು ಕಟ್ಟುವವರು ? ಇಲ್ಲವೆಂತಲೇ ಹಾದಿಗೆ ಹೋಗುವ ಇಂಥ ಕತ್ತೆಗಳೆಲ್ಲ ಲತ್ತೆ ಹೊಡೆದು ಹೋಗುತ್ತವೆ ತಿರುಗಿ ಬರಲಿ ಈ ಮುದುವಾ, ತೋರಿಸುತ್ತೇನೆ ಅವರ ಕತಿ ನನಗೆಲ್ಲಾ ಗೊತ್ತಿದೆ ಮುಪ್ಪಿನ ಕಾಲಕ್ಕೆ ಆಚಾರ ಹೇಳಲಿಕ್ಕೆ ಬಂದಾನ ನಾ ಮುರಿಸಿದ ಕಾಲು ಇನ್ನೂ ನೋಯುತ್ತಿರಬಹುದಲ್ಲೋ

ನುದುವಾ ? ಉಳಿದೊಂದು ಕಾಲೂ ಮುರಿಸುತ್ತಿದ್ದೆನು ಆದರೆ ನನಗೆ ಯಾರಿದ್ದಾರೆ ? ಈ ಜನ್ಮಕ್ಕೆ ಯಾರು ದಿಕ್ಕು ? ಒಬ್ಬ ತಂದೆಯೇ-ಒಬ್ಬ ತಾಯಿಯೇ ? ಯಾರಿದ್ದಾರೆ ? ನನ್ನ ಮಾತು ನಡೆಸುವವರು ಯಾರಿದ್ದಾರ ? ನನ್ನ ಮಾತು ನಡೆಸದ ತಂದೆ ತಾಯಿ ಇದ್ದೂ ಸತ್ತಂತೆಯೇ ಅಂವ ಆ ಒಬ್ಬ ಗಂಡ ಮಾತ್ರ ಇದ್ದನು ಅವನೂ ಕೈಬಿಟ್ಟು ಹೋದನು ! ಹೋಗಲಿ ನನ್ನ ಹಣೀಬರಹದಾಗ ಕಣ್ಣೀರು ಕಟ್ಟ್ಯಾಗಬಾರದೆಂದು ಬರೆದದೆ ! ಯಾರೇನು ಮಾಡುವರು ? ಯಾರಿಗೆ ಯಾರು ?

ಯಾರೀಗಿ ಯಾರಿಲ್ಲ ! ಈ ಮನಕ ಧೀರಿಲ್ಲ !
ಶ್ರೀಪಾಂಡುರಂಗಾ ಕಳ್ಳಾ ನಿನ್ನ ನಂಬಲಾರೆನೋ ॥

[ ಎಂದಾವುದೋ ಪದವನ್ನು ಗೊಣಗುತ್ತ ಕುಳಿತುಕೊಳ್ಳುವಳು ಹೊಲದ ಕೂಲಿಗೆ ಹೊರಟ ಕೆಲವು ಹೆಂಗಸರ ಗುಂಪು ಬರುವದು ]

ತೋಟಿಗ – ಯಾಕವ್ವಾ ! ಸಾತವ್ವಕ್ಕಾ ! ಯಾರ ಹೊಲಕ್ಕೆ ಹೊರಟಿತು ನಿಮ್ಮ ಗುಂಪು ?

ಸಾತವ್ವ – ಸಾವುಕಾರ ಹೊಲದಲ್ಲಿ ಕಸಾ ತೆಗೀಲಿಕ್ಕೆ

ತೋಟಿಗ – ನಮ್ಮಲ್ಲೆಂದು ಬರುವಿರಿ ?

ಸಾತವ್ವ – ಇದು ಮುಗಿದ ಕೂಡಲೇ

ತೋಟಿಗ – ಇಂದೇ ಬನ್ನಿರಿ ಒಂದಾಣೆ ಕೂಲಿ ಹೆಚ್ಚಿಗೆ ಕೊಡುವೆ

ಸಾತವ್ವ – ಒಂದಾಣೆಯ ಸಲುವಾಗಿ ನಿನ್ನ ಕಿರಿಕಿರಿ ಯಾರು ತಾಳಬೇಕು ?

ಸಂಗವ್ವ – ಕಿರಿಕಿರಿಯಿಲ್ಲದ ಈ ಐದಾಣೆ ಕೂಲಿಯೇ ಸಾಕು ಅಣ್ಣಾ

ತೋಟಿಗ – ಎಂದು ಬರುವಿರಿ ಹಾಂಗಾರ ? ಸಾತವ್ವಕ್ಕಾ ?

ಸಂಗವ್ವ – ಮುಂದಿನ ವಾರ ! ಮುಂದಿನ ವಾರ !! ( ಎನ್ನುತ್ತ ಅವಸರದಿಂದ ಹೊರಡುವರು )

ಸಾತವ್ವ – ಲಗೂ ನಡೀರಿ ಸಾಲೀಗಿ ಹೋದ ನಮ್ಮ ಮಲ್ಯಾ ನಮ್ಮನ್ನೆಲ್ಲಾದರೂ ನೋಡಿದರೆ ಬೆನ್ನು ಹತ್ತಿ ಬರುವದು

ಒಬ್ಬಳ – ಯಾಕ್ರೀ, ಯಾರ ಹೊಲಾ ಹಾಳ ಮಾಡಲಿಕ್ಕೆ ಹೊರಟರೀ ? ಊರ ಗರತೇರೆಲ್ಲಾ ಕೂಡಿಕೊಂಡು !

ಸಂಗವ್ವ – ಸಾವಕಾರ ಹೊಲಕ್ಕೆ ಅಜ್ಜೀ!

ಒಬ್ಬಾಕೆ – ಗಟ್ಟಿಳ್ಳವನನ್ನೇ ಗಂಟುಹಾಕೀದಿರೆಲ್ಲೇ?

ಸಾತವ್ವ – ನೀನು ನಮ್ಮೊಳಗೆ ಯಾಕ ಕೂಡುಕೊಂಡೀಯವ್ವಾ ಅಜ್ಜೀ, ನಿನಗೇನು ಕಮ್ಮಿ ಆಗಿದೆ? ಮಾಡಿಹಾಕೂ ಮಗ, ಸೊಸಿ, ಮುಮ್ಮಗ ಎಲ್ಲಾನೂ ಅಬಾದಾನ ಅದೆ!

ಸಂಗವ್ವ – ಹಾಲುಬೋನ ಉಂಡು ಹಾಸು ಹೊಯ್ಯುತ್ತ ನೆರಳಲ್ಲಿ ಕೂಡ್ರುವಾಕೆ ನೀನು (ಎಂದು ನುಡಿದು ಆಕೆಯನ್ನು ನೋಡಿ ನಾಲಗೆ ಕಚ್ಚಿ ಕೊಳ್ಳುವಳು)

ಒಬ್ಬಾಕೆ – ನಾಲಿಗೆ ಏಕೆ ಕಚ್ಚುತ್ತೀ? ಏನು ಅನ್ನಬೇಕಂತೀ ಅಂದುಬಿಡು ಹಾಲುಬೋನ ಉಂಡು ನಾನು ಹಾಸುಹೊಯ್ಯುವಳಂತೆ! ಮುಂದಿನ ಮಾತು ಆಡಿರಲ್ಲ! ಏಕೆ ಓಡಿಹೋಗುವಿರಿ? "ಊರ ಜನರನ್ನು ಕೂಡಿಕೊಂಡು ನೀರು ಹೊರುವವಳು" ಎಂಬ ಮುಂದಿನ ಮಾತು ಏಕೆ ಉಳಿಸಿದೆ—ನನ್ನ ಹಡೆದವ್ವಾ? ಹೇಗೆ ಹೋಗುತಾರೆ ನೋಡಿರಿ! ಹಾಸು ಹೊಯ್ಯುತ್ತ ಕೂಡ್ರುವವಳಂತೆ ನಾನು ನನ್ನನ್ನು ಮಾಡಿಕೊಂಡ ಗಂಡನು ಮನೆಯಲ್ಲಿ ಕೂಡ್ರಿಸಿಲ್ಲ ಇವರಾರು ನನಗೆ ಮನೆಯಲ್ಲಿ ಕೂಡ್ರಹೇಳು ವವರು? ಕೇಳುವ ಧನಿಯಗೇ ಇಲ್ಲದಿರುವಾಗ ಹಾದಿಗ್ಹೋಗುವ ನಾಯಿ ಗಳೆಲ್ಲ ನನ್ನ ಬೋರುಗಲ್ಲು ಮಾಡಿ ಕಾಲೆತ್ತತಕ್ಕುವೇ ಯಾರಿದ್ದಾರೆ ನನಗ? ನನಗೇ ಯಾರಾದರೂ ದಿಕ್ಕು ಇದ್ದರೆ ಹೀಗೇಕೆ ಆಗುತ್ತಿತ್ತು (ಕಣ್ಣು ಒರಿಸಿಕೊಳ್ಳುವಳು)

(ಮೋಟಾರಿನಿಂದ ಕೆಲವರು ಪ್ರಯಾಣಿಕರು ಬರುವರು)

ಹೆಂಡತಿ.– ಇಲ್ಲಿ ಯಾವಳೋ ಹೆಂಗಸು ಅಳುತ್ತ ಕುಳಿತಿದ್ದಾಳೆ ಇವಳಿಗಾದರೂ ಕೇಳಿರಿ

ಒಬ್ಬಾಕೆ – ಏನು ಕೇಳುತ್ತೀ ತಾಯಿಾ? ನನಗಾರು ಕೇಳುವವ ರಿದ್ದಾರೆ?

ಗಂಡ – ಏನಾಗಿದೆ ತಾಯಿಾ, ನಿನಗೆ? ಅಳುವ ಕಾರಣವೇನು?

ಒಬ್ಬಾಕೆ :– ನನಗೇನಾಗುತ್ತದೆ? ದೇವರೇ ವೇಳೆ ತಂದಿದ್ದಾನೆ

ಗಂಡ ·– ನಿನಗೆ ಯಾರೂ ಇಲ್ಲವೇನಮ್ಮಾ?

**ಒಬ್ಬಾಕೆ** – ಇದ್ದ ಒಬ್ಬ ಗಂಡ ಕೈಬಿಟ್ಟು ಹೋದನು

**ಹೆಂಡತಿ** – ಗಂಡನೊಬ್ಬನೇ ಇದ್ದನೇ ?

**ಒಬ್ಬಾಕೆ** – ಗಂಡನೊಬ್ಬನೇ ಇರುತಾನೆ ಇಬ್ಬರು ಮೂವರು ಇರುವರೇ ?

**ಗಂಡ** – ಹಾಗಲ್ಲ ಅಜ್ಜೀ ! ಮಕ್ಕಳು ಮರಿ ಯಾರೂ ಇಲ್ಲವೇ ?

**ಒಬ್ಬಾಕೆ** – ಇದ್ದಾರೆ–ಬೇಕಾದಷ್ಟು ಇದ್ದಾರೆ–ಇದ್ದು ಫಲವೇನು ?

**ಹೆಂಡತಿ** – ಯಾಕವ್ವಾ ! ನಿನ್ನ ಮನೆಬಿಟ್ಟು ಹೊರಗೆ ಹಾಕಿರುವರೇ ?

**ಒಬ್ಬಾಕೆ** – ನನಗೆ ಮನೆಬಿಟ್ಟು ಹೊರಗೆ ಹಾಕುವ ಗಂಡಸು ಯಾವನಿದ್ದಾನೆ ?

**ಗಂಡ** – ತಾಯಿ ತಂದೆ ಇರುವರೇ ?

**ಒಬ್ಬಾಕೆ** – ಸಾಕಾದಷ್ಟು ಕಡವು ಆಗಿದ್ದಾರೆ ನನಗೇನು ಬಂತು ?

**ಹೆಂಡತಿ** – ಬಡವರೇ ?

**ಒಬ್ಬಾಕೆ** – ಸುಟ್ಟರೂ ಸುಡಲಾರದಷ್ಟಿದೆ

**ಗಂಡ** – ಅಣ್ಣತಮ್ಮರು ಇದ್ದಾರೆಯೇ ?

**ಒಬ್ಬಾಕೆ** – ಇದ್ದರೆ ಯಾರಿಗೆ ಯಾರು ?

**ಗಂಡ** – ಕದನ ಬಂದಿದೆಯೇ ?

**ಒಬ್ಬಾಕೆ** – ಕದನವೇಕೆ ? ಕಾಲುಹಿಡಿದರೂ ನಾನು ಅವರಲ್ಲಿಗೆ ಹೋಗುವದಿಲ್ಲ

**ಹೆಂಡತಿ** – ಮತ್ತೇಕೆ ಹೀಗೆ ?

**ಒಬ್ಬಾಕೆ** – ಯಾರೂ ದಿಕ್ಕಿಲ್ಲವೆಂದು !

**ಗಂಡ** – ತಿಳಿಯಿತು ನಡೆ ಇನ್ನು ಮುಂದಿನೂರಿಗೆ ಹೊತ್ತಾಗುತ್ತದೆ ನಮಗೇನು ಮಾಡುವುದು ಪರ ಊರಿನವರಿಗೆ ?

**ಹೆಂಡತಿ** – ಹುಚ್ಚಿಯಿರಬೇಕು, ತಿಳಿಯಿತು

(ಹೊರಡುವರು)

**ಒಬ್ಬಾಕೆ** – ಏನು ತಿಳಿಯಿತೇ ನಿನಗೆ ? ಹುಚ್ಚಿಯಂತೆ ಹುಚ್ಚಿ–ನಾನು ಈಕೆ ಮಾತ್ರ ಜಾಣೆ !

**ಹೆಂಡತಿ** – ಹಾದಿಗ್ಹೋಗುವ ತಂಟೆಯನ್ನು ಕರೆದಂತಾಯಿತಲ್ಲಾ ! (ಹೊರಡುವಳು)

ಒಬ್ಬಾಕೆ – ಹಾದಿಗ್ಹೋಗುವ ತಂಟಿ ನೀನೋ ನಾನೋ? ಯಾವನ ಕೂಡ ಹೊರಟಿರುವಿಯೋ ಏನೋ ಅವಸರದಿಂದ ನಡೆದಿದ್ದೀರಿ ನನಗೆನ್ನು ತ್ತಾಳೆ—ಹಾದಿಗ್ಹೋಗುವ ತಂಟಿಯೆಂದು! ನನಗೇ ಬಲವಿಲ್ಲದಾಗ ಅನ್ನುವ ದಾರಿಗೆ? ಊರ ತುಂಬ ಗಂಡರಿದ್ದರೂ ಉಡಲಿಕ್ಕೆ ಸೀರೆಯಿಲ್ಲದಂತಾಗಿದೆ ಮೂವರು ಹೆಣ್ಣು ಮಕ್ಕಳು, ಇಬ್ಬರು ಗಂಡುಮಕ್ಕಳು, ಅವರನ್ನೆಲ್ಲಾ ಬೆಳೆಸಿ ದೊಡ್ಡದು ಮಾಡಿದ ಕೈ ಇದು! ಈ ಕೈಗುಣವೇ ಹೀಗಿರಬೇಕೇನು? ಮೊಮ್ಮಕ್ಕಳನ್ನು ಎತ್ತಿಕೊಂಡು ಮನೆಯಲ್ಲಿ ಕೂತುಕೋ ಅನ್ನುತ್ತಾನೆ ಮಗ ನನಗೇನು ಕೈಯಿಲ್ಲವೇ—ಕಾಲಿಲ್ಲವೇ? ಇವರ ಸೇವಾಚಾಕರಿ ಮಾಡಲಿಯಾ—ಒಂದು ರೊಟ್ಟಿಗಾಗಿ ಇವರು ಮಾಡಿದ ಪಾಪದ ಫಲ ನಾನು ಭೋಗಿಸಲಿಯಾ? ನನ್ನ ಗಂಡ ಆಯುಷ್ಯ ಬೇಡಿ ಬಂದಿದ್ದರೆ ನಾನೇ ಇನ್ನೂ ನಾಲ್ಕು ಅಡ್ಡಕಸಬಿ ಹಡೆಯುತ್ತಿದ್ದೆ! ಕೈಲಾಗದ ಅಡ್ಡಕಸಬಿಯಂತೆ ಇವರ ಮಕ್ಕಳನ್ನು ಎತ್ತಿಕೊಂಡು ಕೂತು ಹೊತ್ತು ಹಾಕಲಿಯಾ? ಹೊಲದ ಕಡೆಗೆ ಹೋಗೆನ್ನುತ್ತಾನೆ ಇನ್ನೊಬ್ಬ ಮನೆಯಲ್ಲಿ ತಾವು ರಾಜಾರಾಣಿ ಆಗಿ ರಾಜಕೀ ನಡೆಸಬೇಕೆನ್ನುತ್ತಾರೆ ಏನು ಮಾಡಲಿ ಇವರನ್ನು? ನನ್ನ ಬಲಗೈಯಂಥಾ ಗಂಡ ಇದ್ದಿದ್ದರೆ ಒಬ್ಬೊಬ್ಬರನ್ನು (ಅವಡು ಕಚ್ಚುತ್ತಾಳೆ) ಶಿವಶಿವಾ! ಎಂಥ ವೇಳೆ ತಂದೆಯಪ್ಪಾ!

ಶಿವಶಿವನೆಂದರೆ ಸಿಡಿಲೆಲ್ಲ ಬಯಲಾಗಿ  
ಕಲ್ಲು ಬಂದೆಂಗಿ ಕಡೆಗಾಗಿ। ಎಲೆ ಮನವೇ  
ಶಿವನೆಂಬ ಶಬುದ ಬಿಡಬೇಡ॥

ಎಂಥಾ ಹಾಡು ಮಾಡಿ ಇಟ್ಟ್ಯಾವ ನೋಡು ಹಿರಿಯಾರು! (ಅಷ್ಟರಲ್ಲಿ ಆಕೆಯ ಮಗನು ಬರುವನು ಆಕೆಯು ಮುಖತಿರುವಿ ಕೂಡ್ರುವಳು)

ಮಗ – ಯಾಕವ್ವಾ! ಮನೆಗೆ ಊಟಕ್ಕೆ ಬರುವದಿಲ್ಲವೇ?

ಒಬ್ಬಾಕೆ – (ಮೌನ)

ಮಗ – ಗಟ್ಟಿಯಾಗಿ ನಿನ್ನ ಕಾಲು ಹಿಡಿಯುತ್ತೇನೆ, ಏಳವ್ವಾ!

ಒಬ್ಬಾಕೆ – ಹೆಂಡತಿ ಇದ್ದಾಳಲ್ಲಾ!

ಮಗ – ನಿನ್ನ ಮುಂದೆ ಕುಳಿತು ಹಣೆಹಣೆ ಗಟ್ಟಿಸಿಕೊಳ್ಳಲಿಯಾ?

ಒಬ್ಬಾಕೆ – ಆ ಕೆಲಸ ಮನೆಯಾಗೇ ಮಾಡಪ್ಪಾ! ನನ್ನ ಮುಂದೇಕ?

ಮಗ :– ನಿನ್ನ ಅಡ್ಡ ಮಾತು ಇನ್ನು ಬಿಡಬೇಕವ್ವಾ!

ಒಬ್ಬಾಕೆ – ನನ್ನ ಗಂಡ ಸಹ ಇಂಥಾ ಹುಕುಮು ಕೊಡಲಿಲ್ಲ ನನಗೆ!

ಮಗ – ನಿನಗೆ ಏನು ಕಡಿಮೆ ಆಗಿದೆ ಅವ್ವಾ?

ಒಬ್ಬಾಕೆ – ನನಗೆ ಏನಿದಯಪ್ಪಾ?

ಮಗ – ನಿನಗ ಏನೂ ಇಲ್ಲವೇ? ಯಾರೂ ಇಲ್ಲವೇ?

ಒಬ್ಬಾಕೆ .– ದೇವರ ಕಡೆ ಕೈಮಾಡಿ ಹೇಳುತ್ತೇನೆ ನನಗೆ ಯಾರಾರೂ ಇಲ್ಲ ಹತ್ತು ಸಾರೆ ಹೇಳುತ್ತೇನೆ—ಯಾರಾರೂ ಇಲ್ಲ

ಮಗ – ಯಾರೂ ಏಕೆ ಇಲ್ಲ? ನಿನಗ ತಾಯಿ ಇಲ್ಲವೇ ತಂದೆ ಇಲ್ಲವೇ? ಇಬ್ಬರು ಅಕ್ಕ ತಂಗಿ ಇಲ್ಲವೇ? ತಮ್ಮ ಇಲ್ಲವೇ?

ಒಬ್ಬಾಕೆ – ಈ ಹೆಣ್ಣು ಜನ್ಮಕ್ಕೆ ಬೆನ್ನು ಕಟ್ಟುವ ಅಣ್ಣ ಇರಬೇಕು!

ಮಗ – ಹೌದು! ಇವರೆಲ್ಲರೂ ಇದ್ದುದು ಸುಳ್ಳೇ?

ಒಬ್ಬಾಕೆ – ಅವರ ಹೆಸರು ನನ್ನ ಮುಂದೆ ತೆಗೆಯಬೇಡ

ಮಗ – ಇಬ್ಬರು ಗಂಡಸುಮಕ್ಕಳು ನಾವು ಸತ್ತೆವೇ? ಹೆಣ್ಣು ಮಕ್ಕಳು ಗಂಡನ ಮನೆಗೆ ಹೋದರ ಈ ಲೋಕವನ್ನೇ ಬಿಟ್ಟು ಹೋದಂತಾ ಯಿತೇ?

ಒಬ್ಬಾಕೆ – ಅವರೇಕೆ ಹೋಗುತ್ತಾರೆ ಲೋಕಬಿಟ್ಟು? ಹೋಗುವವರು ಹೋಗಲಿ ನನ್ನ ಮಕ್ಕಳು—ತಂದೆಯಿಲ್ಲದ ಪರದೇಶಿ ಮಕ್ಕಳು ತಮ್ಮ ಗಂಡನ ಮನೆಯಲ್ಲಿ ಕಣ್ಣುಮರೆಯಾಗಿ ಇದ್ದರೆ, ಇವನ ಬಾಯಿಗೆ ಎಂಥಾ ಶಬ್ದ ಬರುತ್ತದೆ ನೋಡಿರೇ! ಬೆನ್ನಿಗೆ ಬಿದ್ದ ತಮ್ಮನೊಬ್ಬ ವೈರಿಯಾದನೆಂದರೆ ಹೊಟ್ಟೆಯಲ್ಲಿ ಹುಟ್ಟಿದ ಈ ಮಗನೂ ಒಬ್ಬ ವೈರಿಯಾಗುತ್ತಿದ್ದಾನೆ ನೋಡಿರೇ!

ಮಗ – ಸಾಕು ಸಾಕು! ಬಾಯಿ ಸಡಿಲು ಬಿಡಬೇಡ ನಾನೇನು ಆಡಿದೆನು ನಿನಗೆ? ನೂರು ಮಾತು ಹೊಸಿಯಲಿಕ್ಕೆ?

ಒಬ್ಬಾಕೆ .– ನೂರು ಏಕೆ, ಸಾವಿರ ಮಾತಾಡಿದರೂ ಇದಿರು ಮಾತಾಡದ ನನ್ನ ಧೊರೆ ಹೋಗಿಬಿಟ್ಟನು. ನನ್ನ ಸಿಡಿಪಿಡಿ ಹೊಟ್ಟೆಯೊಳಗೆ ಹಾಕಿಕೊಳ್ಳುವ ನನ್ನ ಸಮುದ್ರವೇ ಆರಿಹೋಗಿದೆ ಇನ್ನು ಯಾರು ತಾಳಿಕೊಳ್ಳುವನರಿದ್ದಾರೆ? ನನ್ನ ಬೈಗಳು ಯಾರು ಸಹಿಸಿಕೊಳ್ಳುವವ

ರಿದ್ದಾರೆ? ಅಜ್ಜಿ! ಅಜ್ಜೀ!! ಗುರುಬಸವ್ವಾ! ನನ್ನನ್ನು ಎಂಥಾ ಹುರಗಾಲರ ಕೈಯಲ್ಲಿ ಕೊಟ್ಟು ಹೋದೆಯೆವ್ವಾ! ಸತ್ತ ಮಗ ಮೂರೇ ವರುಷದವ ನಿದ್ದರೂ ನನಗೆಷ್ಟು ಪ್ರೀತಿ ಮಾಡುತ್ತಿದ್ದನು! ಅವನಿದ್ದರೆ ಹೀಗೇಕೆ ಆಗು ತ್ತಿತ್ತು? ನೆತ್ತಿ ಬೆನ್ನು ನೋಡುವ ನನ್ನ ಹಿರಿ ಅಕ್ಕಾ! ನನ್ನೊಬ್ಬಳನ್ನೇ ಈ ಕರುಳಿಲ್ಲದ ಕಟ್ಟಡವಿಯಲ್ಲಿ ಯಾಕೆ ಬಿಟ್ಟು ಹೊರಟುಹೋದೀ?

ಮಗ – ಮತ್ತ್ಯಾರಾರು ಸತ್ತಿದ್ದಾರೆ ಮೂರು ತಲೆಯಿಂದ, ನೆನಪು ಮಾಡಿಕೋ

ಒಬ್ಬಾಕೆ – ಹೌದೋ ಹೌದು! ನನ್ನ ಹೊಟ್ಟೆಯಲ್ಲಿ ಕಿಚ್ಚು ಬರು ಕುತ್ತದೆ ನೆನಪಾದರೆ ಉರಿ ಏಳುತ್ತದೆ! ನಿನಗೇನು? ನಿನ್ನ ಕಲ್ಲಿನಂಥ ಎದಿ ಬಳಗದಲ್ಲಿ ತಂಣಗೆ ಬಿದ್ದಿದೆ ಎಂಥವರು ಹೋಗಿ ಎಂಥವರು ಉಳಿದರು ನೋಡಿರೇ

ಮಗ – ಸತ್ತವರಿಗಾಗಿ ಅತ್ತು ಇದ್ದವರ ಕುತ್ತಗಿ ಹಿಚುಕುವವಳು ನೀನು

ಒಬ್ಬಾಕೆ – ಹೌದಪ್ಪೋ ಹೌದು! ನಾನು ಹಾಗೇ ಹರಕೀನೇ ಬೇಡಿ ಬಂದಿದ್ದೇನೆ

ಮಗ – ಕೂತುಕೋ ಹತ್ತುಸಾರೆ ಬೇಡಿಕೋ ಹರಕೀನ (ಹೋಗು ವನು)

ಒಬ್ಬಾಕೆ – ಅಡವ್ಯಾಗ ಬಂದು ಕೂತುಕೊಂಡಾದರೂ ಹೊತ್ತು ಕಳೀಬೇಕೆಂದರೆ ಮತ್ತೆ ನನ್ನ ಎದುರಿಗೆ ಬಂದು ನಿಂತು ನನ್ನ ತಲೆ ತಿರುಗಿ ಸುತ್ತವೆ! ನನ್ನ ಪಾಲಿಗೆ ಬಂದದ್ದು ಒಗೀ ಇತ್ತ! ನಾನು ನನ್ನ ಕೈಯಿಂದ ಮಾಡಿಕೊಂಡು ಉಣ್ಣುತ್ತೇನೆ ಯಾರಿದ್ದಾರೆ ನನಗೆ, ಯಾರೂ ಇಲ್ಲ! ಮಾಡುವವರೂ ಮುಟ್ಟುವವರೂ ಉಣಿಸುತಿನಿಸುವವರೂ ಇರಬೇಕಾದರೆ ಶಿವನಲ್ಲಿ ಬೇಡಿ ಬರಬೇಕು! ಈ ಭೂಮಿ ಮ್ಯಾಲ ಬಂದು ಸ್ವಲ್ಪ ದಿನ ಆದವೇ? ಏನೇನು ಮಾಡಿದೆ? ಏನೇನು ಭೋಗಿಸಿದೆ? ಆದರೆ ಈಗ (ಘಟ್ಟಿಸಿರು ಬಿಡುವಳು)

ನಾವೊಂದು ಮಾಡಿದ । ನಾವೊಂದು ಮುಟ್ಟೀದ ।
ನಾ ಹೋಗಿ ಒಂದು ತನಿಥಂಟ ತಿಂದರ ಬಡಬಡಗಿಲೆ ಹೊಡಿದ್ಯಾ ।
ನಮ ಜೀವ ಹೋಗ್ಯಾವ ಕೈಲಾಸಕ ॥

ಹತ್ತೀಕಾಳ ಕುಡು ಅಂದ್ರ। ನಿನ್ನ ಮಡವಿ ಅತ್ತ ಮಾರಿ ತಿರುವ್ಯಾಳ।
ಖಂಡಗ ತಿನ್ನಂದ್ರ। ಇಖ್ಖಂಡಗ ತಿನ್ನುವಂಥ
ತುಂಡೀನ ತಂದು ಹೂಡೋ। ನಮ್ಮ ಜೀವ ಹೋದಾವ ಕೈಲಾಸಕ॥

ಹೀಗಾಗಿದೆ ನನ್ನ ಜನ್ಮ! ಆ ಹಳೆಯ ಎತ್ತಿನ ಜನ್ಮ ಬೇರೆಯಲ್ಲ, ನನ್ನ ಜನ್ಮ ಬೇರೆ ಅಲ್ಲ ಈ ಮಗಾ ಬಂದ್ಹಾಂಗ ಮಾಡಿದಾ, ಕರೆದ್ಹಾಂಗ ಮಾಡಿದಾ, ಹೊರಟು ಹೋದಾ ಅವ್ವ ಬೇಕಾಗಿದ್ದರೆ ನಿಂತು ಕರಕೊಂಡು ಹೋಗುತ್ತಿದ್ದ ಯಾರಿದ್ದಾರೆ ನನಗೆ, ಯಾರೂ ಇಲ್ಲ! ಅವ್ವನ ಅಗತ್ಯ ನಿನಗಿಲ್ಲದಿದ್ದರೆ ಮಗನ ಅಗತ್ಯ ನನಗಾದರೂ ಏನು? ಸಂಜಿ ಆಗೂತನಕ ಇಲ್ಲೇ ಕೂತುಬಿಡತೀನಿ ನೋಡಿದವರೆಲ್ಲ ನಿನಗೇ ಉಗಳತಾರ ನನ ಗಾರು ಅಲ್ಲವೆನ್ನುತ್ತಾರೆ ನೋಡೋಣ

(ಅತ್ತ ಕಡೆಯಿಂದ ಅನಾಥನಾದ ಒಬ್ಬ ಕುರುಡಹುಡುಗನು ಹಾಡುತ್ತ ಬರುವನು)

ಕುರಿ ಕಾಯುತ ಹೋದೇವಣ್ಣಾ ಕುಂಕುಮಥಳ್ಯಾ ತುಳಿದೇವ್ರೋ
ಆಡು ಕಾಯುತ ಹೋದೇವಣ್ಣಾ ಅಡಕೀ ಬನಗಳ ಕಂಡೇವ್ರೋ॥
ಆಡಿನ ಹಾಲಾಗ ಮುರಿಗಳ ಕುದಿಸಿ ಹಾಲಿನ ಹುಗ್ಗಿ ಸುರಿದೇವ್ರೋ।
ಹಸುಗಳ ತರುಬಿ ಗಡಿಗ್ಯಾಗ ಹಿಂಡಿ ಹೊತ್ತು ಹೊತ್ತಿಗೆ ಕುಡಿದೇವ್ರೋ॥

ಒಬ್ಬಾಕೆ – ಏ ಕುರುಡಾ! ಎಲ್ಲಿ ಅವೆ ಹಾಲು! ಎಲ್ಲಿಯು ನಿನ್ನ ಕುರಿ? ಕಿವಿ ಹಿಂಡಿಕೋ ಮೊದಲು

ಕುರುಡ – (ತನ್ನಷ್ಟಕ್ಕೆ)

ಗುರುವೇ! ಗುರುವೇ! ಹೇ ನನ್ನ ಗುರುವೇ
ಕಂಬಳಿ ಗದ್ದುಗಿ ಮಾಡೇನೋ।
ಕಂಬಳಿ ಗದ್ದುಗಿ ಮಾಡಿದ ಮೇಲೆ
ಗುರು ಅಲ್ಲಿ ಮೂರುತನಾದಾನೋ॥
ಗುರು ಅಲ್ಲಿ ಮೂರುತನಾದಾನೋ।
ತುದಿ ಬೆರಳೀಬತ್ತಿ ಹಚ್ಯಾನೋ॥
ಡುಬ್ಬಂಗ್! ಚಪ್ಪಂಗ್!!
ಡುಬ್ಬಂಗ್! ಚಪ್ಪಂಗ್!! (ಕುಣಿಯುವನು)

ಒಬ್ಬಾಕೆ – (ಅಣಕಿಸುತ್ತ) ಅವ್ವಾ ಕುಣಿತಾನಲ್ಲ! ದೇವರು ಎಲ್ಲಾ ಸರಿಯಾಗಿಟ್ಟಿದ್ದರೆ ಎಷ್ಟು ಮೆರಿತಿದ್ದನೋ ಕಣ್ಣು ಕಾಣದ ಪಾಪಿ!

ಕೂಗಿದ್ದು ಕೇಳಿಸಲೊಲ್ಲದು ಲಹರಿಯಲ್ಲಿದ್ದಾನೆ! ಏ ಡುಬ್ಬಂಗಾ! ಇಲ್ಲಿ ಬಾರ್ಲೋ! ಯಾಕೆ ಕೇಳಿಸೀತು ಏನಾದರೂ ಕಡಿಮೆ ಬಿದ್ದರೇ ಕೇಳಿಸೀತಲ್ಲಾ! ಮನಿಯಿಲ್ಲ—ಮಾರಿಲ್ಲ! ಆಯ್ಕೊಂಡು ತಿಂದು ಕಾಯ್ಕೋಲ ದೀವಟಗೆ ಆಗಿದ್ದಾನ! ನನ್ನ ಹಣೆಬರಹ ಮಾತ್ರ ನೋಡಿರಿ ಎಲ್ಲಾರಿದ್ದರೂ ದಿಕ್ಕುಗೇಡಿ ಏನಿದ್ದರೂ ನನ್ನ ಪಾಲಿಗೆ ಏನೂ ಇಲ್ಲದ ದತ್ತಗೇಡಿ

( ಹೆಗಲ ಮೇಲೆ ಗುದ್ದಲಿಯಿಟ್ಟುಕೊಂಡು ನಾಗಪ್ಪನು ಬರುವನು )

ಒಬ್ಬಾಕೆ – ಈ ಮುದುಪಾ, ಗೋರಿ ಸನೀ ಮಾಡಿದರೂ ಗುದ್ದಲಿ ಬಿಟ್ಟಿಲ್ಲ ಇನ್ನೂ ಯಾಕ ಸಾಯ್ತೀಯೋ ನಾಗಪ್ಪಾ! ಯಾರಿಗೆ ಮಾಡುತ್ತೀ?

ನಾಗಪ್ಪ – ಯಾಕೆ ಸಿದ್ದವ್ವಾ! ನಿನ್ನ ಭಾಗ್ಯ ನನಗೆ ಹೇಗೆ ಬರುವದವ್ವಾ!

ಒಬ್ಬಾಕೆ – ಏನು ಅಳುತ್ತದಪ್ಪ ನನ್ನ ಭಾಗ್ಯ?

ನಾಗಪ್ಪ – ಸಿದ್ದವ್ವಾ! ನಿನ್ನ ಕತಿಯೆಲ್ಲ ನನಗೆ ಮೊದಲಿನಿಂದಲೂ ಗೊತ್ತದೆ ನಿನ್ನ ಹೈರಾಣ ದೇವರೇ ಬಲ್ಲ!

ಒಬ್ಬಾಕೆ – ಯಾಕೆ? ದೇವರತನಕ ಯಾಕೆ ಹೋಗುತ್ತಿ? ನಿನಗೆ ಗೊತ್ತಿಲ್ಲವೇನು?

ನಾಗಪ್ಪ – ಗೊತ್ತದೆ ಸಿದ್ದವ್ವಾ! ನಿನ್ನಂಥ ಹಿರಿಯಳು ಮನೆಯಲ್ಲಿದ್ದರೆ ನಾನು ದಿನಾಲು ಎರಡೂ ಹೊತ್ತು ಪೂಜಿಸಿ ಕಾಲು ಬೀಳುತ್ತಿದ್ದೆ

ಒಬ್ಬಾಕೆ – ಹಾಂಗನ್ನು ನನ್ನ ಹಡದಪ್ಪಾ! ಈ ಊರಾಗ ಮೂರು ಸಾವಿರ ಮಂದಿಯಿದ್ದರೂ ನೀನು ಒಬ್ಬವ ಮಾತ್ರ ಖರೇ ಮನುಷ್ಯ ನೋಡಪ್ಪಾ! ತಾಯಿತಂದೆ ಹಡೆದಿದ್ದಕ್ಕೆ ಸಾರ್ಥಕ

ನಾಗಪ್ಪ – ನಾನು ಮುಖದ ಮುಂದೆ ಮಾತಾಡುವದಿಲ್ಲ ಹಿಂದೆ ನಿನ್ನ ವಿಷಯ ನೂರು ಮಾತಾಡುತ್ತೇನೆ ನಿನಗೆ ನನ್ನಂಥ ಕಕ್ಕುಲತಿದಾರರು ಯಾರೂ ಇಲ್ಲ ನಿನ್ನ ದೈವ ಕಡಿಮೆ! ಏಳು! ಉಂಡಿದಿಯೋ ಇಲ್ಲವೋ— ಹೊತ್ತು ಹೊರಳಿದೆ

ಒಬ್ಬಾಕೆ – ಇನ್ಯಾಕೆ ಬೇಕು ಊಟ? ನಿನ್ನ ಮಾತು ಕೇಳಿ ನನ್ನ

ಹಸಿವೆ ನೀರಡಿಕೆ ಹಾರಿಹೋದವು ನನ್ನ ಹೊಟ್ಟ್ಯಾಗಿನ ಹರಳು ಕರಗಿದವು ನಿನ್ನ ಬಳ್ಳಿ ನೂರೊಂದು ಹಬ್ಬಲಿ

ನಾಗಪ್ಪ – ನಿನ್ನಂಥ ತಾಯಿಬೇರು ಇದ್ದರೆ ನೂರೊಂದೇಕೆ ಸಾವಿರಾರು ಬಳ್ಳಿ ಹಬ್ಬುವವು ಏಳು! ಹೊತ್ತು ಹೊರಳಿದೆ ಇಳಿವಯಸ್ಸಿನಲ್ಲಿ ಮನಸ್ಸು ಮರುಗಿಸಬೇಡ ಮೈ ಬಳಲಿಸಬೇಡ ಏಳೇಳು!

ಒಬ್ಬಾಕೆ – ಎದ್ದು ಎಲ್ಲಿಗೆ ಹೋಗಲಿ? ನನಗೇನು ಮನೆಯಿದೆಯೇ? ಮಕ್ಕಳಿದ್ದಾರೆಯೇ?

ನಾಗಪ್ಪ – ಹಾಗನ್ನಬಾರದು! ಮನೆಯತನಕ ಬಂದು ಆ ಉಪಕಾರಗೇಡಿ ನಿನ್ನ ಮಗನಿಗ ಛೀ ಹಾಕುತ್ತೇನೆ, ನಡೆ (ಎಂದು ರಟ್ಟೆ ಹಿಡಿದು ಎಬ್ಬಿಸುವನು)

ಒಬ್ಬಾಕೆ – ಅವನ ಮನೆಯ ಕಟ್ಟೆಯಕಲ್ಲು ಏರುವದಿಲ್ಲ

ನಾಗಪ್ಪ – ನನ್ನ ಮನೆಗೆ ನಡಿ ನನ್ನ ಕೂಡ ಇರು! ಆಯ್ತೇ?

ಒಬ್ಬಾಕೆ – (ಕೃತಜ್ಞತೆಯ ಅಳುವಿನಿಂದ) ನನಗೆ ನೀ ಒಬ್ಬವ ಮಾತ್ರ ದಿಕ್ಕು ನೋಡಪ್ಪಾ! ಏನೋ ಹಳೆಯ ರಿಣಾನುಬಂಧ! ಕೈ ಹಿಡಿದವ ಕೈ ಬಿಟ್ಟು ಹೋದ ಮೇಲೆ ನನ್ನ ಕೂಡ ಸರಿಯಾಗಿ ಮಾತಾಡಿದವನೆಂದರೆ ನೀನೇ ನೋಡು ನಾಗಾ!

ನಾಗಪ್ಪ – ಸುಳ್ಳಲ್ಲ ಸಿದ್ದೊ! ಹಿಂದಿನ ಜನ್ಮದ ರಿಣಾನುಬಂಧ! (ಮನಸ್ಸಿನಲ್ಲಿ) ನಿನ್ನಂತೆ ಮಾತಾಡಿದರೆ ಒಳ್ಳೆಯವರಾಗುತ್ತಾರೆ!

ಒಬ್ಬಾಕೆ – ಯಾರಿದ್ದಾರೆ ನನಗೆ, ಯಾರೂ ಇಲ್ಲ

ನಾಗಪ್ಪ – ಯಾರಿಲ್ಲ ಹೇಳವ್ವಾ! ಎಲ್ಲರೂ ಇದ್ದಾರೆ! ಎಲ್ಲಾ ಇದೆ

ಒಬ್ಬಾಕೆ – ನೀನೊಬ್ಬ ನನ್ನವನಾದರೆ ಜಗತ್ತೆಲ್ಲವೂ ಇದ್ದ ಹಾಗೆಯೇ

ನಾಗಪ್ಪ – ಹಾಂಗನ್ನವ್ವಾ ಜಾಣೇ!!

ಬಿದ್ದೀಯಬೇ ಮುದುಕೀ! ಹುಲಗೂರ ಸಂತೀ!
ಗದ್ದಲದಾಗ ಬಿದ್ದೀಯಬೇ ಮುದುಕೀ॥

(ಹೋಗುವರು)



# ಬುದ್ಧದೇವ



## ೧ನೇ ಪ್ರವೇಶ

(ಅರಣ್ಯ)

ಸಿದ್ಧಾರ್ಥ – ಆಹಹ! ಇಲ್ಲಿ ಗಿಡಬಳ್ಳಿಗಳು ಅದೆಷ್ಟು ಸ್ವೇಚ್ಛೆಯಾಗಿ ಬೆಳೆದಿರುವವು! ಇವೆಲ್ಲ ದೇವರ ಮಕ್ಕಳು! ಅಂತೇ ಇಷ್ಟು ಸುಂದರವಾಗಿವೆ ಆಗೋ, ಹೂಗಳು ಅರಳಿ ನಿಂತು ಸಾಕು ಸಾಕಾಗಿ ಕಣ್ಣು ಮುಚ್ಚಿ ನೆಲಕ್ಕೆ ಉರುಳುವವು ಅಯ್ಯೋ! ಇಂಥ ಕೋಮಲವೂ ಸುಂದರವೂ ಆಗಿರುವ ಹೂಗಳಿಗೂ ಈ ಗತಿಯೇ! (ಬಾಡಿದ ಹೂ ನೋಡಿ) ನನ್ನ ಪ್ರೀತಿಯ ಹೂವೇ, ನಿನ್ನ ಬಣ್ಣವೆಲ್ಲಾ ಬತ್ತಿಹೋಗಿದೆ ಕುಲುಕುಲು ನಗುವ ನಿನ್ನ ಬಿಳಿನಗೆಯು ಮಾಯವಾಗಿ ಮುಖವು ಬಾಡಿದೆಯಲ್ಲ!

ಚೆನ್ನ – ಮಹಾರಾಜ, ನೋಡಿರಿ, ಈ ಮರವು ಎಷ್ಟು ಸುಂದರ ವಾಗಿದೆ!

ಸಿದ್ಧಾರ್ಥ – ಅಹ್ಹಹ್ಹ!! ಈ ದೇವಸೃಷ್ಟಿಯಲ್ಲಿ ಕುಳಿತುಕೊಳ್ಳು ವದು ಗೌಣವೆಂದು ಹೇಗೆ ನಿಂತಿದೆ ನಮುಭಯುಗಳಿಂದ! ಇದು ನೋಡು ಇದು ಯಾವ ಹೂ? ಎಂಥಾ ಗಡಸುಮರದಲ್ಲಿ ಎಂಥ ಕೋಮಲವಾದ ಹೂ ಹುಟ್ಟಿದೆ! ಹೇಳಿದರ ಹೆಸರನ್ನು

ಚೆನ್ನ – ಮಹಾರಾಜ, ಇದರ ಹೆಸರು ಸುರಹೊನ್ನಿ!

ಸಿದ್ಧಾರ್ಥ – ಹೌದು ನಿಜವಾಗಿ ಇದು ಸುರಹೊನ್ನಿಯೇ ಸೈ! ಮರದಲ್ಲಿ ಅರಳಿದ ಹೂಗೊಂಚಲುಗಳನ್ನು ನೋಡಿದರೆ ಸುರಲೋಕದವರು ತೋರಣ ಕಟ್ಟಿರುವಂತೆ ತೋರುತ್ತದೆ! ಬಲುಮೆಯಿಂದ ಅಡವಿಗೆ ಬಂದಿದ್ದರೂ ಹೇಳಲಾಗದಷ್ಟು ಸಂತೋಷವಾಯ್ತು ಅಹ್ಹ! ಏನು ಸೊಗಸು! ಆ ವನಪ್ರಾಂತದ ಸುತ್ತಾಕಡೆಗೆಲ್ಲ ದೃಷ್ಟಿ ತಿರುಗಿಸು ಎಷ್ಟು

ತರದ ಹೂಗಳು! ಎಷ್ಟು ತರದ ಬಣ್ಣಗಳು! ಅಹಹ! ಮುಗಿಲ ಮೇಲೆ ಮೋಡಗಳು ಹೇಗೆ ತೇಲುತ್ತವೆ! ನೋಡು! ಕೆಳಗಿನ ಹಸುರು ಬನದ ಪಡಿನೆಳಲೇ ಮುಗಿಲಿನ ಸರೋವರದಲ್ಲಿ ಹೀಗೆ ಬಿಳಿಯ ಬನವಾಗಿ ಮೂಡಿ ದಂತೆ ಕಾಣುತ್ತಿದೆಯಲ್ಲ!

**ಚೆನ್ನ** – ರಾಜಕುಮಾರರೇ, ಈ ಮುಗಿಲ ಮಂಟಪವೆಲ್ಲಾ ಕರಗಿ ಹೋಗುವಂತಹದಾಗಿದೆಯಲ್ಲ!

**ಸಿದ್ಧಾರ್ಥ** – ಒಂದು ಕರಗಿದರೆ ಮತ್ತೊಂದು ಮೂರ್ತಿ! ಅದರ ಲ್ಲೇನು? (ಮೇಲೆ ನೋಡಿ) ಅಗೋ ಅಗೋ, ಮೇಘಪಕ್ಷಿಗಳು ಛೀ ಚೀತ್ಕಾರ ಮಾಡುತ್ತವೆ! ಅವು ನಿಜವಾದ ಪಕ್ಷಿಗಳೇ! ಅಲಲ! ಆ ಪಕ್ಷಿ ಗಳು ಹೀಗೇಕೆ!! ಪಕ್ಷಿಗಳು ನೆಲಕ್ಕೇ ಬಿದ್ದವಲ್ಲ!!

**ಚೆನ್ನ** – ಹೌದು! ಮಹಾರಾಜ, ಕಡಕೊಂಡೇ ಬಿದ್ದವು! ಏನಾಗಿರ ಬೇಕು?

**ಸಿದ್ಧಾರ್ಥ** – (ಓಡುತ್ತ ಸಮೀಪಕ್ಕೆ ಹೋಗಿ) ಅಹ! ಹಂಸಪಕ್ಷಿ! ಅಯ್ಯೋ, ಮೈಗೆ ಬಾಣ ತಗುಲಿದ ರಕ್ತ ಸೋರುವದು! ಮೈಯೆಲ್ಲ ರಕ್ತ! (ಎತ್ತಿಕೊಂಡು ಮೆಲ್ಲಗೆ ಒರಸುವನು)

**ಚೆನ್ನ** – ಯಾರೋ ಬಾಣದಿಂದ ಹೊಡೆದಿದ್ದಾರೆ

**ಸಿದ್ಧಾರ್ಥ** – ಅಯ್ಯೋ! ನನ್ನ ಹಂಸವೇ! ನಿನಗೆಷ್ಟು ನೋವಾಗಿರ ಬಹುದಲ್ಲ! ರೆಕ್ಕೆಗಳು ಸೋತಿದ್ದಾವು! ನಾಲಿಗೆ ಸೆಳೆಯುತ್ತಲಿದ್ದೀತು! ಕಾಲಿಗೆ ಪೆಟ್ಟು ತಗಲಿರಬೇಕು! ಅಹಹ! ಬೆಳ್ಳಗೆ ಬಿಳುಪಾದ ರೆಕ್ಕೆಗಳನ್ನು ನೋಡಿದರೆ ಕಣ್ಣು ಕುಕ್ಕುತ್ತವೆ ಏನು ಕೊಕ್ಕವಿದು! ಹಂಸಾ! ನಿನ್ನ ಅನುರಾಗವೆಲ್ಲ ತುಟಿಯಲ್ಲೇ ತುಂಬಿ ತುಳುಕುತ್ತಿದೆಯಲ್ಲ! ಚೆನ್ನಾ! ಇದರ ಗಾಯಕ್ಕೆ ಕಟ್ಟುವ ಕೆಲವು ಹಸುರೆಲೆಗಳನ್ನು ತೆಗೆದುಕೊಂಡು ಬಾ! ಬೇಗನೆ ತೆಗೆದುಕೊಂಡು ಬಾ ಹಾಗೇ ನೀರೂ ಸಹ. (ಚೆನ್ನನು ಹೋಗುವನು.)

**ಚೆನ್ನ** – (ಬಂದು) ಮಹಾರಾಜ! ತಂದೆ

**ಸಿದ್ಧಾರ್ಥ** – ಚೆನ್ನಾ, ಅದನ್ನು ನಾನು ಕಟ್ಟುವೆ ನೀನು ಮೆಲ್ಲ ಮೆಲ್ಲನೆ ಗಾಳಿ ಹಾಕು

ಚೆನ್ನ – ಹಾಗೇ ಮಾಡುತ್ತೇನೆ, ಕುಮಾರರೇ !

( ಸಿದ್ಧಾರ್ಥ ಹಕ್ಕಿಯ ಗಾಯವನ್ನು ಕಟ್ಟಹತ್ತುವನು )

ಚೆನ್ನ – ಯಾರು ಹೊಡೆದರೋ ಪಾಪ !

ಸಿದ್ಧಾರ್ಥ – ಮನುಷ್ಯನಿಗೆ ನೋವಾದರೆ ಹೇಳಲಿಕ್ಕೆ ಬಾಯಾದರೂ ಇರುತ್ತದ

ದೇವದತ್ತ – (ಧಾವಿಸಿ ಬಂದು) ಇಲ್ಲೆ ಇದೆಯಲ್ಲ ನನ್ನ ಪಕ್ಷಿ!

ಸಿದ್ಧಾರ್ಥ – ತಮ್ಮಾ, ಇದೆಲ್ಲ ನಿನ್ನ ಆಟವೇ ಕಾಣುತ್ತದೆ

ದೇವದತ್ತ – ಅಣ್ಣಾ, ಸಾಕುಮಾಡು ನಿನ್ನ ಹಿರಿತನ! ನೆರಳಲ್ಲಿ ಕುಳಿತುಕೊಂಡು ಪಕ್ಷಿಯನ್ನು ಹಿಡಿದಿರುವಿ (ಕೋಪ) ಸಾಮರ್ಥ್ಯವಿದ್ದರೆ ನೀನೂ ಬೇಟೆಯಾಡಬೇಕಿತ್ತು!

ಸಿದ್ಧಾರ್ಥ – (ನಸುನಗೆ) ಸುಮ್ಮನೆ ಅತ್ತ ಬದಿಗಾಗು ಪಾಪ! ಈ ಪಕ್ಷಿಯ ಬಿಕ್ಕುವ ಬಾಯಿ ಕಾಣಲೊಲ್ಲದೇನು ನಿನಗೆ ?

ದೇವದತ್ತ – (ಸಿಟ್ಟು) ಅದೆಲ್ಲಾ ಸಾಕು, ಇದು ನನ್ನ ಪಕ್ಷಿ!

ಸಿದ್ಧಾರ್ಥ – ನಿನ್ನ ಪಕ್ಷಿ ಇದ್ದರೆ ನೀನು ಹೀಗೆ ದಯವಿಲ್ಲದೆ ಹೊಡೆಯುತ್ತಿದ್ದಯಾ ?

ದೇವದತ್ತ – ನಾನು ಹೊಡೆದವನೆಂದೇ ನನ್ನ ಪಕ್ಷಿಯದು! ಚೆಲ್ಲು ನನ್ನ ಬೇಟೆಯನ್ನು ಹೀಗೆ ಅಪಹರಿಸಬಹುದೇ ?

ಸಿದ್ಧಾರ್ಥ – ಪಕ್ಷಿಗೆ ಉಪಕಾರ ಮಾಡಿದವನಂತೆ ತನ್ನ ಪಕ್ಷಿಯೆಂದು ಹೇಳುತ್ತಾನೆ ನಿನ್ನ ಅಧಿಕಾರವು ಈ ಪಕ್ಷಿಯ ಮೇಲೆ ಎಷ್ಟೂ ಇಲ್ಲ ತಿರುಗಿ ಕೇಳಿದರೆ ಉಪಚಾರ ಆರೈಕೆ ಮಾಡಿದ ನನ್ನ ಒಡೆತನವೇ ಅದೆ! ಆದುದರಿಂದ ಇದು ನನ್ನ ಪಕ್ಷಿ!

ದೇವದತ್ತ – ಎಲಾ! ಹಿರಿಯರೆಂದು ಬೆದರಿಸುವಿರೇನು ? ಕೊನೆಗೂ ಇದು ನನ್ನ ಪಕ್ಷಿ!

ಚೆನ್ನ – ಮಂತ್ರಿಕುಮಾರರೇ, ಇಬ್ಬರೂ ನನ್ನದೊಂದು ಬಿನ್ನಹವನ್ನು ಲಾಲಿಸಿರಿ ಈ ಹಕ್ಕಿಯೊಂದಿಗೆ ಹಿರಿಯರ ಬಳಿಗೆ ನಾವೆಲ್ಲಗೂ ಹೋದರೆ ಅಲ್ಲಿ ಎಲ್ಲಾ ನ್ಯಾಯವಾಗುವದು

ಸಿದ್ಧಾರ್ಥ – ಆಗಲಿ ಅಲ್ಲಿ ಹೇಗೂ ಈ ಹಕ್ಕಿ ನನ್ನದೇ ಎಂದು ಸಿದ್ಧವಾಗುತ್ತದೆ

ದೇವದತ್ತ – ನನ್ನ ಹಕ್ಕಿ ನಿನ್ನದಾಗಲಿಕ್ಕೆ ಇದೇನು ಆಡುವ ಆಟವಲ್ಲ

ಚೆನ್ನ – ಉಭಯ ಕುಮಾರರೇ, ದಯವಿಟ್ಟು ನನ್ನ ಬಿನ್ನಹವನ್ನು ಲಾಲಿಸಿ ಮೊದಲು ಸಮಾಧಾನ ತಾಳಿರಿ ಆಮೇಲೆ ಹಿರಿ ಒಡೆಯರ ಸನ್ನಿಧಾನದಲ್ಲಿ ಎಲ್ಲಾ ಸರಿಹೋಗವದು

ಸಿದ್ಧಾರ್ಥ+ದೇವದತ್ತ – ಒಳ್ಳೇದು ನಡೆ

(ಹೋಗುವರು)

## ೨ನೇ ಪ್ರವೇಶ

(ಸಭಾಮಂದಿರದಲ್ಲಿ ಸಿದ್ಧಾರ್ಥ, ದೇವದತ್ತ, ರಾಜ, ಮಂತ್ರಿ ಮೊದಲಾದವರು)

ಶುದ್ಧೋದನ – ದೇವದತ್ತಾ ನೀನು ಮುಂದೆ ಮಂತ್ರಿಯಾಗತಕ್ಕವನು ಇಂದು ಹೀಗೆ ದೌರಾತ್ಮ್ಯವೇಕೆ ಮಗೂ?

ದೇವದತ್ತ – ದೊಡ್ಡಪ್ಪಾ! ನನ್ನದೇ ದೌರಾತ್ಮ್ಯವೇನು ಮತ್ತೆ? ಹಿರಿಮಗನು ಸಾಧುವಾಗಿ ಕಾಣುವನೇ ನಿಮಗೆ?

ಮಂತ್ರಿ – ಎಲೋ ದೇವದತ್ತಾ! ಕುಮಾರರೊಡನೆ ಏನು ನ್ಯಾಯ ನಿನ್ನದು?

ಸಿದ್ಧಾರ್ಥ – (ಪಕ್ಷಿ ತೋರಿಸಿ) ತಾತಾ, ಈ ಪಕ್ಷಿಯ ಸಲುವಾಗಿ!

ಶುದ್ಧೋದನ – ಹೊಡೆದವರಾರು?

ದೇವದತ್ತ – ನಾನು! ನಾನು!! ನಾನೇ ಹೊಡೆದವ!!!

ಮಂತ್ರಿ – ಮುಂದೇನು?

ದೇವದತ್ತ – ಅದು ನನ್ನ ಪಕ್ಷಿ ಅಹುದಲ್ಲವೇ?

ಶುದ್ಧೋದನ – ಹೌದು

ಸಿದ್ಧಾರ್ಥ – ಅಪ್ಪಾ, ಹಾಗಲ್ಲ ಪ್ರಾಣಿಯ ಅತ್ಯಂತ ಪ್ರಿಯವಾದ ಜೀವವನ್ನು ಹೊಡೆದವರು ಒಡೆಯರೇನು?

ಮಂತ್ರಿ – ಸೈ ಸೈ! ಭಾಪು ಭಾಪು!! ನೀವೇ ನಿಜವಾದ ಒಡೆಯರು!

ಶುದ್ಧೋದನ – ಮಗೂ, ರಾಜನೀತಿಯಂತೆ ಅದನ್ನು ಹೊಡೆದವರೇ ಅದರ ಒಡೆಯರು ಮೃತದೇಹವು ಅವರಿಗೇ ಸಲ್ಲತಕ್ಕದ್ದು

ಸಿದ್ಧಾರ್ಥ – ಬರೇ ದೇಹವಿದ್ದರೆ ಇವನು ಒಡೆಯನಾಗಬಹುದು ಆದರೆ ಅದಕ್ಕೆ ಇನ್ನೂ ಜೀವವಿದೆ ಆದ್ದರಿಂದ ನಾನೇ ಅದರೊಡೆಯ ನಲ್ಲವೇ ?

ದೇವದತ್ತ – ದೊಡ್ಡಪ್ಪನವರ ಮಾತಿಗೆ ಪ್ರತಿ ಹೇಳಬೇಡ ಅವ ರೆಂದಂತೆ ಹೊಡೆದ ಹಕ್ಕಿಗೆ, ಅದು ಸತ್ತರೇನು ? ಇದ್ದರೇನು ? ಹೊಡೆದವನೇ ಒಡೆಯನು

ಸಿದ್ಧಾರ್ಥ – ಅದೆಂದಿಗೂ ಆಗದು ನಾನೇ ಒಡೆಯನು ! ಹೇಗೆಂದರೆ —ಅರೆಜೀವವಾಗಿ ನೆಲಕ್ಕುರುಳಿದ ಪ್ರಾಣಿಯನ್ನು ಎತ್ತಿಕೊಂಡು ಆರೈಕೆ ಮಾಡಿದ ನಾನೇ ಬಾಧ್ಯನು

ದೇವದತ್ತ – ಬೇಟೆಯಾಡುವದರಲ್ಲಿ ಈ ಯುಕ್ತಿವಾದನು ನಡೆಯ ಲಾರದು

ಮಂತ್ರಿ – ದೇವದತ್ತಾ, ನಿನ್ನ ಪಕ್ಷಿಯಾದರೆ ನೀನು ಮಾಡುವ ದಾದರೂ ಏನು ?

ದೇವದತ್ತ – ಏನೇನಿಲ್ಲ ನನ್ನ ಪಕ್ಷಿಯೆಂದರ ಸಾಕು ಅದು ಯಾರ ಹತ್ತಿರವಿದ್ದರೇನು !

ಮಂತ್ರಿ – ಪಕ್ಷಿಯು ನಿನ್ನದಾಗದು ಜೋಪಾನ ಮಾಡುವಂತಿದ್ದರೆ ನೀನು ತೆಗೆದುಕೋ

ದೇವದತ್ತ – ನಾನು ಹೆಂಗಸರಂತೆ "ಅಯ್ಯೋ ಬಿಳಿರೆಕ್ಕೆ ! ಅಯ್ಯೋ ಪಾಪ ಪ್ರಾಣಿ ! ಬಿಕ್ಕುತ್ತದಲ್ಲ ! ಅಯ್ಯಯ್ಯೊ ಇದಕ್ಕೆ ನೀರು ಹಾಕಿರಿ. " ಎಂದು ಲಲ್ಲೆ ಮಾಡುವವನಲ್ಲ !

ಮಂತ್ರಿ .– ಬಹಳ ಬಾಯಿ ಬಿಡಬಾರದಪ್ಪಾ ! ಇಂದು ನೀವು—ಗೆಳೆ ಯರಿದ್ದರೂ ನಾಳೆ ಕುಮಾರರು ನಿನ್ನ ಪ್ರಭುಗಳು ನೀನೇ ಅವರವನಾದ ಮೇಲೆ ನಿನ್ನ ಹಕ್ಕಿ ಅವರದಾಗುವದರಲ್ಲಿ ಅಗಾಧವೇನು !

ದೇವದತ್ತ – ಈ ದೇವದತ್ತನು ಕಲ್ಲೆದೆಯುವ ! ಹಲ್ಲಿಂದ ಕರಕರನೆ ಹರಿದು ಎರಡು ತುಂಡು ಮಾಡಿ ಒಗೆಯತಕ್ಕವನು ! ಗಾಯದಿಂದ ಒಸರುವ

ರಕ್ತವನ್ನು ಆನಂದದಿಂದ ನೋಡುತ್ತ ಹೊತ್ತು ಕಳೆಯುವವನು! ಒಂದೊಂದೇ ರೆಕ್ಕೆಯನ್ನು ಕಿತ್ತುತ್ತ ಮೋದಪಡುವವನು! ಇಂಥ ಅಕರಾಳ ವಿಕರಾಳ ಯಮನಂಥ ನನ್ನ ಹಕ್ಕಿಯಲ್ಲದೆ ಈತನ ಹಕ್ಕಿಯೇ ಅದು?

ಶುದ್ಧೋದನ – ಸೈ ಸೈ! ಭಾಪು ಭಾಪು!! ಮಗೂ, ನಾಳೆ ನೀನು ನಮ್ಮ ಕುಮಾರನಿಗೆ ತಕ್ಕ ವೀರ ಮಂತ್ರಿಯಾಗತಕ್ಕವನೆಂದ ಮೇಲೆ ಇಂದು ಇಂಥ ವೀರೋಚಿತ ವಾಣಿಯು ನಿನ್ನಲ್ಲಿರಬೇಕಾದದ್ದು ನ್ಯಾಯವೇ ಆಗಿದೆ

ಸಿದ್ಧಾರ್ಥ – ನಿನ್ನಂಥ ಕಟುಕನ ಕೈಯಲ್ಲಿ ಈ ಹಕ್ಕಿಯನ್ನು ಎಂದೂ ಕೊಡುವದಿಲ್ಲ ಅದರ ರಕ್ಷಕನಾದ ನಾನೇ ಅದರ ಒಡೆಯನು

ದೇವದತ್ತ – ಅಣ್ಣಾ, ಈ ಹಾಳುರಗಳೆಯನ್ನು ನಿಲ್ಲಿಸು ಒಳ್ಳೇ ಮಾತಿನಿಂದ ನನ್ನ ಹಕ್ಕಿಯನ್ನು ನನಗೆ ಕೊಡು

ಮಂತ್ರಿ – ದೇವದತ್ತಾ, ರಾಜನೀತಿಯಂತೆ ರಾಜವನದೊಳಗಿನ ಪದಾರ್ಥಗಳೆಲ್ಲ ರಾಜರ ಬಾಧ್ಯತೆಗೆ ಸೇರಿದವುಗಳಾದ್ದರಿಂದ ಈ ಹಕ್ಕಿಯ ಮೇಲೆ ಮಹಾರಾಜರ ಹೊರತು ಇನ್ನಾರದೂ ಅಧಿಕಾರವಿಲ್ಲ

ದೇವದತ್ತ – ನನ್ನನ್ನು ಮಾತಿನಲ್ಲಿ ಕಟ್ಟಿಹಾಕಿದರೆ ಉಪಾಯವಿಲ್ಲ

ಶುದ್ಧೋದನ – ಮಕ್ಕಳಿರಾ, ಇದನ್ನು ನೀವಿಬ್ಬರೂ ಕೂಡಿ ನನಗೆ ಸಾಕುವದಕ್ಕೆ ಕೊಟ್ಟುಬಿಡಿರಿ ಆರ್ತಪರಿಪಾಲನವು ರಾಜನಾದವನ ಪರಮಕರ್ತವ್ಯವಾಗಿದೆ

(ಮಕ್ಕಳಿಬ್ಬರೂ ನಗುತ್ತ ಹಕ್ಕಿಯನ್ನಿತ್ತು ತೆರಳುವರು.)

ಸಭಿಕರೆಲ್ಲರೂ – ಜಯ ಜಯ! ಆರ್ತಪರಿಪಾಲಕ ಶುದ್ಧೋದನ ಮಹಾರಾಜರಿಗೆ ಜಯ ಜಯಕಾರವು.

(ಎಲ್ಲರೂ ಹೊರಟ ಹೋಗುವರು)

ಶುದ್ಧೋದನ – (ವಿಚಾರಿಸಿ) ಮಂತ್ರಿಗಳೇ, ಇಂದಿನ ಕತೆಯನ್ನು ನೋಡಿದರೆ ಆ ಸಂಶಯವೇ ನಿಜವಾಗುವ ಹಾಗೆ ತೋರುವದಿಲ್ಲವೇ ನಿಮಗೆ?

ಮಂತ್ರಿ – ಹೌದು ದೊರೆಗಳೇ, ನನಗಾದರೂ ಅದೇ ಸಂಶಯವೇ ಬಾಧಿಸುತ್ತದೆ ಏನು ಮಾಡಲಿ!

ಶುದ್ಧೋದನ – "ಮಕ್ಕಳಿಲ್ಲ" ವೆಂದು ದೇವರಲ್ಲಿ ಮೊರೆಯಿಡುತ್ತಿರುವಾಗ . ಆ ದಯಾಳುವು ಪಕ್ಕನೆ ಕಣ್ಣು ತೆಗೆದನು ಒಳಿತೆ ಆಯಿತು. ಆದರೆ . . . (ಚಿಂತಿಸುವನು)

ಮಂತ್ರಿ – ಮಹಾರಾಜ, ಸುಮ್ಮನೆ ವ್ಯಥೆಮಾಡಿಕೊಳ್ಳಬೇಡಿರಿ ಆತ ನೇನು ಸಾಮಾನ್ಯ ಮನುಷ್ಯನಲ್ಲ ಸುಪ್ರಸಿದ್ಧನೇ ಆಗುವನೆಂದು ಹೇಳಿಲ್ಲವೇ ಜ್ಯೋತಿಷಿಗಳು?

ಶುದ್ಧೋದನ – ಅವೆಲ್ಲಾ ಸರಿ ಮಗನು ಸಂನ್ಯಾಸಿಯಾಗಿ ಸುಪ್ರ ಸಿದ್ಧನಾಗಬಾರದು! ರಾಜ ಮಹಾರಾಜ ಸಾರ್ವಭೌಮನಾಗಿ ದಿಕ್ಕು ದೇಶ ಗಳನ್ನೆಲ್ಲ ಕೈವಶಪಡಿಸಿಕೊಂಡು ಪ್ರಸಿದ್ಧನಾದರ ನನಗೆ ತುಂಬಾ ಸಂತೋಷ!

ಮಂತ್ರಿ – ಹಾಗೆ ಆಗೇ ಆಗುವನು! ಅಸಾಧಾರಣ ವ್ಯಕ್ತಿಯೇ ಆಗುತ್ತಾನೆಂದ ಮೇಲೆ ಹಾಗ ಆಗದೆ ಇರುವನೇ?

ಶುದ್ಧೋದನ – ಭವಿಷ್ಯವನ್ನು ಹೇಳಿದ್ದೇ ಬೇರೆ ರಾಜ್ಯದಲ್ಲಿ ನಿಂತರೆ ಚಕ್ರವರ್ತಿ, ಅರಮನೆಯನ್ನು ಬಿಟ್ಟು ಹೊರಬಿದ್ದರೆ ವಿಖ್ಯಾತ ಭಿಕ್ಷುಕ!

ಮಂತ್ರಿ – ಅರಮನೆಯನ್ನು ಬಿಟ್ಟುಹೊರಬಿದ್ದರೆ ಹೌದಷ್ಟೇ?

ಶುದ್ಧೋದನ – ಆದರೇನು?

ಮಂತ್ರಿ – ಅರಸುಮಗನನ್ನು ಅರಮನೆಯ ಹೊರಗೇ ಬಿಡಬಾರದು, ಆಯ್ತು ಹೇಗೆ ಆಗುವನು ಸಂನ್ಯಾಸಿ?

ಶುದ್ಧೋದನ – ಕಾಯ್ದು ಪೂರೈಸುವದು ಯಾರಿಂದಲೂ ಸಾಧ್ಯವಿಲ್ಲ

ಮಂತ್ರಿ – ಮಹಾರಾಜ! ನೀವು ಉತ್ತರಾರ್ಧಕ್ಕೆ ಮಹತ್ವಕೊಟ್ಟು ಸಂಶಯಪಟ್ಟುಕೊಂಡು ಕೊರಗುತ್ತಿರುವಿರಿ "ಮಗನು ರಾಜ್ಯಕ್ಕೆ ಚಕ್ರ ವರ್ತಿಯಾಗುವನು" ಎಂಬ ಪೂರ್ವಾರ್ಧಕ್ಕೆ ಮಹತ್ವ ಕೊಟ್ಟುಕೊಂಡು ಹಿಗ್ಗಬಾರದೇಕೆ?

ಶುದ್ಧೋದನ – ಹಾಗೂ ಮಾಡುವೆನು ಮಂತ್ರಿಗಳೇ, ಒಮ್ಮೊಮ್ಮೆ! ಈ ಸಂತೋಷದ ಸುಳಿಗಾಳಿಯು ಹೀಗೆ ಸುಳಿಯಿತು ಎನ್ನುವದರಲ್ಲೇ— ಅದು ಮಾಯವಾಗಿ ಆ ಸಂಶಯದ ಬಿರುಗಾಳಿ ಬೀಸಿ ವ್ಯಥೆಪಡಿಸುವದು ಏನು ಮಾಡಲಿ? (ಚಿಂತ) ಮಂತ್ರಿಗಳೇ ನೀವೆಂದಂತೆ ಅರಮನೆಯ ಹೊರಗೆ ಹೋಗಗೊಡದಿರಲಿಕ್ಕೂ ಬಂದೀತು ಆದರೆ ವೈರಾಗ್ಯದ ಕಾರಣ ಗಳೇನು ಒಳಗೆ ಇರುವದಿಲ್ಲವೇ? ಅಲ್ಲದೆ ಆತನು ಎಂದೆಂದೂ ಅರಮನೆಯ ಹೊರಗೆ ಹೋಗದಿರುವದಾದರೂ ಹೇಗೆ ಶಕ್ಯವಿದೆ? ಅಪ್ಪಿ ತಪ್ಪಿ ಹೊರಗೆ ಹೋದರೂ ಕೂಡ ರಾಜಬೀದಿಯಲ್ಲಿ ಮುದುಕರು, ರೋಗಿಗಳು, ಹೆಣಗಳು ಇಂಥವೆಲ್ಲ ಇದ್ದೇ ಇರತಕ್ಕವುಗಳು ಇವುಗಳನ್ನೆಲ್ಲ ಹೇಗೆ ತಡೆಯಬೇಕು?

ಮಂತ್ರಿ – ರಾಜಶಾಸನಕ್ಕೆ ಮೀರಿದ ಮಾತು ಯಾವುದಿದೆ? ಅದರಲ್ಲೇನಿದೆ ಮಹಾರಾಜ, ರಾಜಧಾನಿಯಲ್ಲಿ ಆ ಪ್ರಕಾರ ವ್ಯವಸ್ಥೆಯನ್ನು ಇಡಿಸೋಣ ಮತ್ತೇನಿಲ್ಲ, ವೈರಾಗ್ಯವನ್ನು ಹುಟ್ಟಿಸುವ ಯಾವ ಸಂದರ್ಭಗಳೂ ರಾಜಕುಮಾರನ ಕಣ್ಣಿಗೆ ಬೀಳದಿದ್ದರಾಯಿತು

ಶುದ್ಧೋದನ – ಇಷ್ಟೇ ಅಲ್ಲ, ಕಿವಿಗೂ ಬೀಳಬಾರದು, ಇಂಥ ಸಂಗತಿಗಳು. ಕುರುಡರು, ಕುಂಟರು, ಕುರೂಪಿಗಳು, ಬೈರಾಗಿಗಳು, ರೋಗಿಗಳು, ರಾಜಪುತ್ರನ ಕಣ್ಣಿಗೆ ಬೀಳದಂತೆ ವ್ಯವಸ್ಥೆ ಇಡಿಸತಕ್ಕದ್ದು

ಮಂತ್ರಿ – ಮಹಾರಾಜರ ಅಪ್ಪಣೆಯಂತೆ ವ್ಯವಸ್ಥೆ ಮಾಡಲಿಕ್ಕೆ ಹೊರಡುವೆನು, ಆಜ್ಞೆಯಾಗಲಿ

ಶುದ್ಧೋದನ – ಒಳ್ಳೇದು ನಾನೂ ಒಳಗೆ ಅರಮನೆಯಲ್ಲಿ ಹೀಗೆಯೇ ವ್ಯವಸ್ಥೆ ಇಡಿಸುವೆನು ಬಹಳವೇನಿಲ್ಲ, ಸಿದ್ಧಾರ್ಥನು ವಿಷಯಾಸಕ್ತನಾಗುವಂತೆ ಪ್ರಯತ್ನಿಸತಕ್ಕದ್ದು ಅವನು ವಿಷಯಾಸಕ್ತನಾಗಬೇಕಾದರ ಯಾವ ಯಾವ ಉಪಾಯಗಳು ಬೇಕೋ ಆ ಆ ಉಪಾಯಗಳನ್ನು ಮಾಡೇ ಬಿಡುವೆನು ನಿನ್ನ ಕರ್ತವ್ಯವನ್ನು ನೀನು ನೋಡಿಕೋ

ಮಂತ್ರಿ – ಮಹದಾಜ್ಞೆ

(ಪರದೆ ಬೀಳುವದು)

## ೩ ನೇ ಪ್ರವೇಶ

[ ಅರಮನೆಯ ಮುಂಭಾಗ ]

ಸೇವಕ – (ಬಂದು ನರಳುತ್ತ) ಅಯ್ಯೋ! ಯಾರೂ ಇಲ್ಲವೇ? ಸ್ವಲ್ಪ ಜಡ್ಡಾಗಿದೆ ಅಯ್ಯ ಯ್ಯೋ ಉಫ್!

ದ್ವಾರಪಾಲಕ – (ಧಾವಿಸಿ) ಏ! ಯಾರು ನೀನು? ಮುಸುಕು ಹಾಕಿಕೊಂಡು ಎಲ್ಲಿಗೆ ನಡೆದೆ?

ಸೇವಕ – ಈ ಫಲಾಹಾರದ ಸಾಮಗ್ರಿಯನ್ನು ಸಿದ್ಧಾರ್ಥ ಮಹಾರಾಜರಿಗೆ ಕೊಡಲಿಕ್ಕೆ

ದ್ವಾರಪಾಲಕ – ಮುಸುಕು ಹಾಕಿಕೊಂಡೇ ಹೊರಡಬೇಕೇನು?

ಸೇವಕ – ಸ್ವ-ಲ್ಪ ಜಡ್ಡಾಗಿದೆ

ದ್ವಾರಪಾಲಕ – ನೀನು ಒಳಗೆ ಹೋಗುವದನ್ನು ಕೇಳಿದರೆ ಮಹಾ ರಾಜರು ಬಡಿಬಡಿದು ಕೊಂದಾರು ಹುಚ್ಚು ನಾಯಿಯಂತೆ

ಸೇವಕ – ಇಲ್ಲೋ ಅವ್ವಾ! ಯಾರೂ ಕಾಣಲಿಲ್ಲೆಂದು ಒಳಗೆ ನಡ ದಿದ್ದೆ ನೀನೇ ಒಯ್ದಿಡು ಒಳಗೆ ನನಗೆ ಜಡ್ಡಾಗಿದೆ–ಮಾರಾಯಾ! ಉಪಕಾರವಾಗುತ್ತದೆ ಮಾಡು ಇಷ್ಟು ಕೆಲಸಾ!

ದ್ವಾರಪಾಲಕ – ಜಡ್ಡಾಗಿದ್ದರೆ ಕೂಲಿ ಹಚ್ಚಬೇಕು! ಪ್ರಹರಿಯ ಮನುಷ್ಯರಿಗೆ ಹೀಗೆ ಕಲಸ ಹೇಳಬೇಕೇ?

ಸೇವಕ – ಬಿಡು ಮಹಾರಾಯಾ, ಮಾತ್ರಾರಾದರೂ ಇದ್ದರೆ ಕಳಿಸಿ ಕೊಡುವೆ, ಆಯಿತೋ ಇಲ್ಲೋ (ಕಟ್ಟಿ ಹೊತ್ತುಕೊಂಡು ಹೋಗುವನು)

ದ್ವಾರಪಾಲಕ – ಏ ಮುದುಕೀ! ರಾಜದ್ವಾರದ ಮುಂದೆ ಏಕೆ ಬಡಿಯುತ್ತೀ ಮಗನನ್ನು! ಅಳಿಸಬೇಡ ಎತ್ತಿಕೊಂಡು ಬೀದಿಗುಂಟ ನಡ! ಇಲ್ಲಿ ಬರಲೇ ಬೇಡಿನ್ನು! ಗೊತ್ತಿಲ್ಲವೇ? ಮೊನ್ನೆ ಡಂಗುರ ಹೊಡಿ ಸಿದ್ದು!! (ಆಡ್ಡಾಗಿ) ಏಸು ವ್ಯೆಯಿಂದ ಸಹಿಸಬೇಕಪ್ಪ! ದಂಡಿನಲ್ಲಿ ನಿಂತು ಒಂದು ಗಳಿಗೆ ಕಾದಾಡಬೇಕು ಆದರೆ ಇಂಥ ಹೊಣೆಗಾರಿಕೆಯ ಕೆಲಸವನ್ನು ಎಂದಿಗೂ ಮಾಡಬಾರದು ಮಂದಿ ಇರುವಲ್ಲಿ ಅಳೋದು, ಕರೆಯೋದು, ನಗೋದು ನಡೆಯತಕ್ಕವೇ! ಇವನ್ನೆಲ್ಲ ಮುಚ್ಚಿಕೊಂಡು ಹೋಗಬೇಕಂದರೆ ಬಲು ಬಿರಿ ಕೆಲಸ! ಸಾಗಲಿ! ಎಷ್ಟು ದಿನ ಸಾಗುತ್ತದೋ ಸಾಗಲಿ!

ಭಿಕಾರಿ ಮುದುಕಿ – (ಗೊಗ್ಗರ ಧನಿಯಿಂದ) ಮೂರ್ದಿನಾ ಅತು ಕೂಳಿಲ್ಲಾ! ಪುಣ್ಯಾಬರ್ತಾದ ಒಂದಿಷ್ಟು ನನ್ನ ಮೊರೆಕೇಳ್ರ್ಯಾ, ಪುಣ್ಯಾತ್ಮರಾ!!!

ದ್ವಾರಪಾಲಕ – (ಹೌಹಾರಿ ಎದ್ದು) ಏನಿದು? ಈ ಭಿಕಾರಿ ಮುದುಕನು ಇಲ್ಲಿ ಹೇಗೆ ಬಂದ ಕುಂಟುತ್ತ! ಏ! ನಡೆ! ಮುಂದಾಗು!!!

(ಪರದೆ ಇಳಿಯುವದು)

## ೪ನೇ ಪ್ರವೇಶ

(ಅರಮನೆಯಲ್ಲಿ ಉಯ್ಯಾಲೆಯ ಮೇಲೆ ಯಶೋಧರೆ)

ಯಶೋಧರೆ – ದಾಸೀ, ಆಯ್ತೋ ಇಲ್ಲವೇ ? ಒಂದು ಕೆಲಸ ಹೇಳಿದರೆ ಅದರಲ್ಲೇ ತೊಡಗಿಕೊಂಡು ಕುಳ್ಳಿರುತ್ತೀ—ಬೇಗನೆ ಮುಗಿಸಬಾರದೇ ?

ದಾಸಿ – ತಾಯಿಾ ! ಸ್ವಲ್ಪ ಸಾವಕಾಶವಾಯ್ತು ಕ್ಷಮಿಸಿರಿ

ಯಶೋಧರೆ – ಆಯ್ತಿಲ್ಲವೇ ? ಹೋಗು, ಆ ಬಂಗಾರ ತಾಟನಲ್ಲಿ ಹಣ್ಣು ಹಂಪಲುಗಳ ವ್ಯವಸ್ಥೆ ಮಾಡಿಟ್ಟು ಇತ್ತ ಕಡೆಗೆ ಬಾ

ದಾಸಿ – ಹಾಗೇ ಮಾಡುವೆನವ್ವನವರೇ !

ಯಶೋಧರೆ – ಬರುವ ಮುಂದೆ ತಾಂಬೂಲದ ಎಲ್ಲ ಸಾಹಿತ್ಯವನ್ನು ಸಿದ್ಧಪಡಿಸಿ ತರತಕ್ಕದ್ದು ಈ ಉಯ್ಯಾಲೆಯ ಮೇಲಿನ ಗಾದೆಗಳಿಗೆ ಗಂಧದೆಣ್ಣೆಯನ್ನು ಚಿಮುಕಿಸಲಿಕ್ಕೆ ಮರೆಯಬೇಡ

ದಾಸಿ – ಆಜ್ಞೆ ! ಅಮ್ಮಾ !

ಯಶೋಧರೆ – ನನಗೇನೂ ಸುಖಬೇಡ ಮಹಾರಾಜರಿಗೆ ಅಸಮಾಧಾನವಾಗದಂತೆ ನೋಡಿಕೊಳ್ಳುವದೇ ನನ್ನ ಕೆಲಸ ಮಹಾರಾಜರು ಈಗ ಗೆಳೆಯರೊಂದಿಗೆ ಉದ್ಯಾನದ ಕಡೆ ಹೋಗಿರುವರೆಂದು ನನಗಿಷ್ಟು ಅವಕಾಶವಾಗಿದೆ- ಇಲ್ಲದಿದ್ದರೆ ಉಸುರಾಡಿಸಲಿಕ್ಕೂ ಅವಕಾಶವಿಲ್ಲ

ದಾಸಿ – ಅಮ್ಮಾ, ಹೂಗಾರ್ತಿಯು ಹೂಗಳನ್ನು ತಂದು ಕೊಟ್ಟಿರುವಳು ಇವನ್ನು ತೆಗೆದುಕೊಳ್ಳಿರಿ

ಯಶೋಧರೆ – ಅವ್ವಯ್ಯಾ ! ಈಗ ನೆನಪಿಗೆ ಬಂತು ಆ ಕರಡಿಗೆಯನ್ನು ತಾ ಇಲ್ಲಿ ನಿನ್ನಿನ ಆ ಬಾಡಿದ ಹೂಗಳನ್ನು ಬೇಗನೇ ಬಳಿದು ಚೆಲ್ಲು, ದೂರ !! ಗೊತ್ತಿಲ್ಲವೇನೇ ಮೊನ್ನೆ ಮಹಾರಾಜರು ಬಾಡಿದ ಹೂಗಳನ್ನೆತ್ತಿಕೊಂಡು ತಾಸೆರಡು ತಾಸು ದುಃಖಿಸುತ್ತ ಕುಳಿತದ್ದು ? ಹಣ್ಣುಕಾಯಿ ಎಲೆ ಎಲ್ಲವನ್ನೂ ನಳನಳಿಸುವಂತೆಯೇ ಕಾಯ್ದಿಟ್ಟುಕೊಳ್ಳಬೇಕು. ನೆನಪಿರಲಿ

ದಾಸಿ .– ಅಮ್ಮಾ, ಎಲ್ಲಾ ಸರಿಪಡಿಸಿದ್ದಾಯ್ತು

ಯಶೋಧರೆ – ಹಾಗಾದರೆ ಮುಂದಿನ ಕೆಲಸ ತೀರಿಸು. ಹೋಗು!

( ದಾಸಿ ಹೋಗುವಳು. ಯಶೋಧರೆ ಹಾಡುತ್ತ ಉಯ್ಯಾಲೆ ತೂಗಿಕೊಳ್ಳುವಳು. )

( ಸಿದ್ಧಾರ್ಥನೂ ಚೆನ್ನನೂ ಬರುವರು )

ಯಶೋಧರೆ – ಅಪ್ಪಾ ! ಯಾವಾಗ ಬಂದು ನಿಂತಿರುವರೋ ಏನೋ !

ಸಿದ್ಧಾರ್ಥ – ಪ್ರಿಯೇ, ಯಾವ ಪುರಾಣವನ್ನೋದುತ್ತಿದ್ದೆ ? ( ಉಯ್ಯಾಲೆಯನ್ನೇಳುವನು )

ಯಶೋಧರೆ – (ತನ್ನಲ್ಲಿ) ನಾನು ಮೈ ಮರೆತು ಹಾಡಿದ್ದನ್ನು ಕೇಳಿದರೋ ಏನೋ (ಕುರಿತು) ಮತ್ತಾವ ಪುರಾಣ? ತಮ್ಮ ಧ್ಯಾನ !

ಸಿದ್ಧಾರ್ಥ – ಪ್ರಿಯೇ, ಈ ಹೊತ್ತು ಎತ್ತ ನೋಡಿದರೂ ಸೊಗಸೇ ಸೊಗಸು ! (ಹೂಗಳನ್ನು ಮೂಸುತ್ತ) ಪ್ರಿಯೇ, ಇವೇನು ನಿನ್ನ ಕಣ್ಣುಗಳ ಪ್ರತಿಬಿಂಬಗಳೇ ? ಅಹ್ಹ ! ಉದ್ಯಾನದಲ್ಲಿ ಅಲ್ಲೊಂದಿಲ್ಲೊಂದು ಇರುವ ಹೂಗಳು ಒಟ್ಟುಗೂಡಿ ಬಂದಿರುವವಲ್ಲವೇ ? ಪ್ರಿಯೇ, ಈ ಕರ್ಣಪೂರಕ ವನ್ನು ನಿನ್ನ ಕಿವಿಗ ಇಡಿಸುತ್ತೇನೆ ನೋಡುವಾ ಹೇಗೆ ಕಾಣಿಸುವಿ ?

ಯಶೋಧರೆ – ತಮ್ಮ ಇಷ್ಟದಂತೆ ಆಗಲಿ

ಸಿದ್ಧಾರ್ಥ – (ಕಿವಿಗಿಟ್ಟು) ಆಹಹ ! ಏನು ಸಹಜ ಸೌಂದರ್ಯವಿದು ಲತಾಂಗಿ, ಯಶೋಧರೆ ! ಲತೆಯಂತೆ ನಿನ್ನ ಮೈ ! ಲತೆಗೊಂದು ಹೂ ಬಿಟ್ಟಿ ರುವಂತೆ ನಿನ್ನ ಕಿವಿಯಲ್ಲಿ ಹೂವಿನ ಗೊಂಚಲು ! ಪ್ರಿಯೇ, ನೀನು ನಿಜ ವಾಗಿ ಯಶೋಧರೆಯೇ ? ಆಗಲಿಕ್ಕಿಲ್ಲ ! ನೀರಾಟವಾಡಲಿಕ್ಕ ಬಂದ ದೇವ ಲೋಕದ ಯಕ್ಷಕಾಂತೆಯೇನು ? ನಾನು ನಿನ್ನನ್ನು ಯಶೋಧರೆಯೆಂದು ಸಂಬೋಧಿಸಿದ್ದು ಅಪರಾಧವಾಯ್ತು ದೇವಿ !

ಯಶೋಧರೆ – ಬಿಡಿರಿ, ನೀವು ಬೆಳೆಸಿ ಏನನ್ನಾದರೂ ಅನ್ನುವಿರಿ ! ಹೆಂಡತಿಯನ್ನು ಈ ಪರಿ ಅಕ್ಕರತೆಯಿಂದ ನೋಡುವ ವಿದ್ಯೆಯನ್ನು ಆ ರಘು ಕುಲದ ರಾಮಚಂದ್ರನ ಕತೆಯಲ್ಲಿ ಕಲಿತಿರೆಂದು ತೋರುತ್ತದೆ

ಸಿದ್ಧಾರ್ಥ – ಏನೆಂದೀ ? ರಘುಕುಲದ ರಾಮಚಂದ್ರನ ಕಥೆಯೇ (ನಿಟ್ಟುಸಿರಿಟ್ಟು) ಯಶೋಧರೆ, ಎಲ್ಲಾ ಅಶಾಶ್ವತ ನೋಡು ! ಆ ದಂಪತಿಗಳ ಅಂಥ ಅಕ್ಕರತೆಯು ಎಷ್ಟು ಅಲ್ಪಾಯುಷಿಯಾಗಿತ್ತು ನೋಡೇ ! ಈ ಜಗತ್ತಿ ನಲ್ಲಿ ಎಲ್ಲಾ ಅಶಾಶ್ವತ ! ಎಲ್ಲದರಲ್ಲಿಯೂ ದುಃಖ !!

ಯಶೋಧರೆ – [ಸ್ವಗತ] ಅಪ್ಪಯ್ಯ ! ಇನ್ನೇನು ಮಾಡಲಿ ? ಇವರ ಚಿತ್ತವು ಮತ್ತೆ ಆ ಕಡೆಗೆ ಹೊರಳಿತಲ್ಲ ! ಇದನ್ನು ಹೇಗೆ ಮರಯಿಸಲಿ ! ಪ್ರಕಟ] ನಾಥಾ, ಉದ್ಯಾನದಲ್ಲಿ ಆ ಚಿಕ್ಕ ಗಿಡಕ್ಕ ಹೂಗಳು ಬಿಟ್ಟಿದ್ದವೇ ?

ಸಿದ್ಧಾರ್ಥ – ಯಾವುದು ? ಆ ಬಕುಲದ ಗಿಡಗಳೇ ? ಅಹ್ಹ ! ತುಂಬಾ ಹೂಗಳು ! ಏನು ಸುಗಂಧ !

ಯಶೋಧರೆ – ಆ ಗಿಡವನ್ನು ನಮ್ಮ ಮದುವೆಯ ದಿನ ಹಚ್ಚಿದೆ ನೆನಪಿದೆಯಲ್ಲವೇ ?

ಸಿದ್ಧಾರ್ಥ – ಅಹುದಹುದು ! ಮದುವೆಯ ಹೊಸತಾಗಿ !!

[ನರ್ತನ ಮೇಳದವರು ಬಂದು ಮುಜುರೆ ಮಾಡುವರು]

ಯಶೋಧರೆ – [ಪ ನ್ನಿಸಿ ಕಿವಿಯಲ್ಲಿ] ಮಹಾರಾಜರು ಬಹಳ ನೊಂದು ಕೊಂಡಿದ್ದಾರೆ ನರ್ತನವು ಬಹಳ ಮನೋಹರವಾಗಿರಬೇಕು

ಕುಸಮಾ – ನಿಮ್ಮ ದಯೆಯಿದ್ದರೆ ಎಲ್ಲಾ ಪೂರಯಿಸುತ್ತದೆ ತಾಯಿ!

[ಗಾಯನ ನರ್ತನಾದಿಗಳು ಆಗುತ್ತವೆ ]

ಸಿದ್ಧಾರ್ಥ – ಅಹಾ ! ಪ್ರಿಯೇ ! ಸಂಗೀತದಲ್ಲಿ ಎಂಥ ಅದ್ಭುತ ಶಕ್ತಿಯಿದ ನೋಡು ! ಜೀವಕ್ಕೆ ಹೊಸ ಚೇತನವುಂಟಾಗುತ್ತದೆ ಪ್ರಿಯೇ, ಈ ಗಾಯಕಿ ನರ್ತಕಿಯರಿಗೆಲ್ಲ ಪಾರಿತೋಷಕವನ್ನಿತ್ತು ಮನ್ನಿಸು

ಯಶೋಧರೆ – ಸಂತೋಷ [ಹಾಗೆಯೆ ಮಾಡುವಳು ಪರದೆ ಬೀಳುವದು.]

## ೫ನೇ ಪ್ರವೇಶ

( ಅರಮನೆಯ ಒಂದು ಭಾಗ ಶುದ್ಧೋದನ, ಮಂತ್ರಿ )

ಶುದ್ಧೋದನ – ಮಂತ್ರೀ ! ಮನುಷ್ಯ ಪ್ರಯತ್ನದಲ್ಲಿಯೂ ತಥ್ಯವಿದೆ ನೋಡು ! ಹೇಗಾಗಿದೆ ಈಗ ಸಿದ್ಧಾರ್ಥನ ಒಲವು !

ಮಂತ್ರಿ – ಇನ್ನು ಸಂನ್ಯಾಸಿಯಾಗುವ ಭೀತಿಯನ್ನು ಹಿಡಿವ ಕಾರಣವೇ ಇಲ್ಲ. ಅವರು ತಿರುಗಿ ಈಗ ನೀಗಲಾರದಷ್ಟು ವಿಷಯಾಸಕ್ತರಾಗಿ ಕುಳಿತರು

ಶುದ್ಧೋದನ.– ಮಂತ್ರೀ, ಆತನು ವಿಷಯಾಸಕ್ತನಾದಷ್ಟು ನನಗೆ ಸಂತೋಷವೇ ! ವಿರಕ್ತನಾಗಿ ಮನೆ ಬಿಟ್ಟು ಅರಣ್ಯ ಸೇರುವ ಅಂಜಿಕೆಯು ನನ್ನನ್ನು ಆವರಿಸಿಬಿಟ್ಟಿತ್ತು

ಮಂತ್ರಿ – ತಮ್ಮ ಅಪ್ಪಣೆಯಂತೆ ಅನೇಕ ವಾದಕ ನರ್ತಕರು ಅಲ್ಲಿ ಕೆಲಸ ಮಾಡುವಂತೆ ಮೇಳವಿಸಲಾಗಿದೆ ಒಂದೇ ದಿವಸ ನೃತ್ಯ ವಾದನ [illegible] [illegible] ಹೊತ್ತೇ ಹೋಗದಂತಾಗುತ್ತದೆ.

ಶುದ್ಧೋದನ – ಆದರೆ ನಾವು ಮಾಡಿದ ಸಾಹಸವೂ ಅಷ್ಟೇ, ಸಿದ್ಧಾರ್ಥನನ್ನು ಯಶೋಧರೆಯು ಪರಿಪರಿಯಿಂದ ಹೊರಳಿಸಿದುದೂ ಅಷ್ಟೇ! ಅವಳ ಜಾಣ್ಮೆ, ಚೆಲ್ವಿಕೆ, ಸಿದ್ಧಾರ್ಥನಿಗೆ ತಕ್ಕಂತೆ ಇವೆ ಮೊದಲು ಚಿಂತೆಯಲ್ಲಿ ನವೆನವೆದು ಹೋದ ಮನಸ್ಸು ಈಗ ಸಂತೋಷ ಹೊಂದಿದೆ ನನಗೆ ಈ ಜಗತ್ತೇ ಸಂತೋಷಮಯವೆಂದು ಅನಿಸಹತ್ತಿದೆ ಈ ಸಂಸಾರವು ಸ್ವರ್ಗಲೋಕದಷ್ಟು ಸುಖಕರವಾಗಿದೆ ನನಗೆ ಅಮೃತ ಉಂಡ ಹಾಗೆ ಪ್ರಾಯ ಬಂದಿದೆ

ಮಂತ್ರಿ – ತಮ್ಮ ಸಂತೋಷವೇ ನಮ್ಮ ಸಂತೋಷವು

(ಪರದೆ ಇಳಿಯುವದು)

## ೬ನೇ ಪ್ರವೇಶ

(ರಾಜಬೀದಿ ಸಿದ್ಧಾರ್ಥನೂ ಚೆನ್ನನೂ)

ಚೆನ್ನ – (ಮನಸಿನಲ್ಲಿ) ಅಯ್ಯಯ್ಯೋ! ಘಾತವಾಯ್ತು! ಆಗೋ ಅಲ್ಲಿ ಹಣ್ಣು ಹಣ್ಣು ಮುದುಕನು! ತತ್ತರಾಡಿಸುತ್ತ ಹೊರಟಿದ್ದಾನೆ!! ನಮ್ಮ ಮಹಾರಾಜರ ಕಣ್ಣಿಗೆ ಬೀಳುವನೋ ಏನೋ! ಹೇಗೆ ಮಾಡಲಿ? (ಳುರಿತು) ಮಹಾರಾಜ, ಈಚೆಗಿನ ದಾರಿಯಲ್ಲಿ ಹೊರಳಿ ಹೋಗುವಾ ಅಂದರೆ ಸೊಗಸು

ಸಿದ್ಧಾರ್ಥ – ಏಕೆ? ಇದೇ ಹಾದಿ ಸೊಗಸಾಗಿದೆ (ಮುದುಕನನ್ನು ಕಂಡು ಭ್ರಾಂತಚಿತ್ತನಾಗಿ) ಏನು! ಈ ಪ್ರಾಣಿ ಯಾವುದು? ಎಲಾ! ಎಂಥ ವಿಚಿತ್ರವಾಗಿದೆಯಲ್ಲ!

ಮುದುಕ – (ನೈನಡುಗುತ್ತ) ಅಪ್ಪಾ, ಒಂದೀಟು ಕೊಳು . ಹಾಕ್ರೆಪ್ಪೋ! ಯಾರೂ ಇಲ್ಲೆ ಪ್ಪ ಈ ಪರದೇಶಿಗೆ! ನಿಮ್ಮ ಮಕ್ಕಳಿಗೆ ಪುಣ್ಯಾ ಬರಲಿ! ಮೂರ್ದಿನಾ ಕೂಳಿಲ್ಲ (ತಲೆ ಅಳಗಾಡಿಸುತ್ತ ನಿಲ್ಲುವನು)

ಸಿದ್ಧಾರ್ಥ – ಇದು ಏನು?

ಚೆನ್ನ – ಅಯ್ಯೋ! ಆಯಿತು! ಅಂಜುವಲ್ಲಿಯೇ ಹೊತ್ತು ಮುಳುಗಿತು!! ನಾವು ಇಷ್ಟು ದಿವಸ ಜಾಗ್ರತೆಯಿದ್ದದ್ದು ಇಂದು ಹೊಳೆಯಲ್ಲಿ ಹುಳಿ ತೊಳೆದಂತಾಯ್ತು! ಮೊದಲು ಈ ಬೀದಿಯಿಂದ ಬರುವದು ಗೊತ್ತಾಗಿದ್ದರೂ ಈ ಕಡೆಯ ಅಧಿಕಾರಿಗಳು ಈ ಮುದುಕನನ್ನು ಹೇಗೆ ನೋಡ

ಲಿಲ್ಲವೋ ಏನೋ! ಇನ್ನು ಏನು ಗತಿ? (ಪ್ರಕಟ) ಮಹಾರಾಜ, ನಾವು ವೇಗವಾಗಿ ಹೊರಡಬೇಕಲ್ಲವೇ?

ಸಿದ್ಧಾರ್ಥ – ಅದೇಕೆ? ಈ ಪ್ರಾಣಿಯ ಸಮಾಚಾರವನ್ನು ವಿಚಾರಿಸದೆ ಹೊರಡುವಂತಿಲ್ಲ!

ಮುದುಕ – ಅಪ್ಪೋ! ಈ ಪರದೇಸೀಗೆ ಯಾರೂ ಇಲ್ರೊ, ನಮ್ಮಪ್ಪಗೋಳ್ರ್ಯಾ!

ಸಿದ್ಧಾರ್ಥ – ಏನಿದು! ಈ ಪ್ರಾಣಿಯ ಅವಸ್ಥೆ ವಿಚಿತ್ರವಾಗಿದೆ ಕಣ್ಣುಗಳು ಎಷ್ಟು ಒಳಗೆ! ಮೈದೊಗಲು ಜೋತಾಡುತ್ತಿದೆ! ಬಾಯಲ್ಲಿ ಹಲ್ಲಿಲ್ಲ! ತಲೆಯು ನುಣುಪಾಗಿದೆ! ಬಿಳೇ ಕೂದಲು!! ಮನುಷ್ಯನಾಕಾರ ಇದ್ದುದಿದ್ದು ವಿರೂಪನಾಗಿ ಕಾಣುವನಲ್ಲ! ಅಹ್ಹ! ದೇವರು ಎಂಥೆಂಥ ಸ್ಥಿತಿಯನ್ನು ತರುತ್ತಿರುತ್ತಾನೆ! ಆಯ್ಯೋ! ನಾನು ಇದೊಂದು ಹೊಸ ಅನುಭವವನ್ನೇ ಪಡೆದಂತಾಯ್ತು! ಈ ಪ್ರಾಣಿ ಏನೋ ಬೇಡುತ್ತಿದೆ ಎಷ್ಟು ವಿಚಿತ್ರ ಸ್ಥಿತಿಯಿದು!

ಚೆನ್ನ – (ಮನ) ಆಯ್ಯೋ! ಋಷ್ಯಶೃಂಗನಂತೆ ಬೆಳೆದ ಮಹಾರಾಜರು ನೋಡುತ್ತಲೇ ನಿಂತರಲ್ಲ! (ಕುಂಠು) ಮಹಾರಾಜರೇ! ಏಕೆ ನಿಂತಿರಿ! ಹೊತ್ತಾಗುವದಿಲ್ಲವೇ?

ಸಿದ್ಧಾರ್ಥ – ಚೆನ್ನಾ! ಈ ಪ್ರಾಣಿಯನ್ನು ನೋಡು, ಎಷ್ಟು ದೀನನಾಗಿದ್ದಾನೆ! ಇದೊಂದು ಬೇರೊಂದು ಪ್ರಾಣಿಯೇ?

ಚೆನ್ನ – (ಮನಸಿನಲ್ಲಿ) ಯಾವ ಪ್ರಾಣಿಯೋ ಯಾರು ಬಲ್ಲರು? ಇಂಥ ಪ್ರಾಣಿಗಳು ಊರಲ್ಲಿಯೇ ಬೇಕಾದಷ್ಟಿವೆ!

ಸಿದ್ಧಾರ್ಥ – ಚೆನ್ನಾ! ಈತನಿಗೆ ಇಂಥ ಅವಸ್ಥೆ ಏಕೆ?

ಚೆನ್ನ – ಎಲ್ಲರಿಗೂ ಮುಪ್ಪು ಬರುವಂತೆ ಇವನಿಗೂ ಮುಪ್ಪು ಬಂದಿದೆ! ಇದೇನು ಆಶ್ಚರ್ಯ?

ಸಿದ್ಧಾರ್ಥ – ಎಲ್ಲರಿಗೂ ಬರುವಂತೆ ಅಂದರೆ? ನನಗೂ ಮುಪ್ಪು ಬಂದರೆ ಇದೇ ಗತಿಯೇ?

ಚೆನ್ನ – ಎಲ್ಲರಿಗೂ ಈಗತಿಯೇ ಹೇಗೆ? ಅವರವರ ದೇಹ ಪ್ರಕೃತಿ

ಯಂತೆ

ಸಿದ್ಧಾರ್ಥ – ಮುಪ್ಪು ಈತನನ್ನು ಇಂಥ ದುರವಸ್ಥೆಗೀಡು ಮಾಡಿತೇ? (ಆಶ್ಚರ್ಯ) ಮೊದಲು ಈತನು ನಮ್ಮಂತೆ ದೃಢಾಂಗನಾಗಿಯೇ ಇದ್ದನಲ್ಲವೇ ?

ಚೆನ – ಹೌದು ಮಹಾರಾಜ! ಆದರೆ ಎಲ್ಲಾ ಚೆನ್ನಾಗಿದ್ದವರು ಮುಪ್ಪಿನಲ್ಲೂ ದೃಢಾಂಗರಾಗಿಯೇ ಇರಬಹುದು

ಸಿದ್ಧಾರ್ಥ – ಈ ಜಗತ್ತಿನಲ್ಲಿ ಪಾಪ! ಇವನೊಬ್ಬನಿಗೇ ಈ ದುರ್ದೆಸೆಯೇಕೆ ?

ಚೆನ್ನ – (ಮನಸ್ಸಿನಲ್ಲಿ) ಅಹ್ಹ! ಕೊನೆಗೆ ಏನಾಗುವದೋ ಏನೋ (ಪ್ರಕಟ) ಏನೋ ಅಪರೂಪವಾಗಿ ಹೀಗೂ ಆಗುತ್ತಿರುವದುಂಟು

ಸಿದ್ಧಾರ್ಥ – (ಮನ) ಏನು ? ಇಂದು ರಾಜೋಪಭೋಗವನ್ನು ಭೋಗಿಸುತ್ತಿರುವ ನನಗೆ ಇಂಥ ಗತಿಯೆ ಕಡೆಗೆ? ನನ್ನ ಮುದ್ದಿನ ಯಶೋಧರೆಗೂ? ಈ ಯೌವನವು, ದಿನಗಳುರುಳುತ್ತ ಹೋದಂತೆ ಹಾಳಾಗುತ್ತ ಮುಪ್ಪು! ಮುಪ್ಪು!! ಅಯ್ಯೋ! ಎಂಥ ಅದ್ಭುತ ಹೆಸರು? ಮು ಪ್ಪು! ಮುಪ್ಪು ನನ್ನಂಥ ಪ್ರಾಯದವನಿಗೂ ಬರುತ್ತದಲ್ಲ!! ನನ್ನಂಥ ರಾಜಪುತ್ರನಿಗೂ ಮುಪ್ಪು ತಪ್ಪುವದಿಲ್ಲವೇ? ಸಾಕು! ಇನ್ನು ವಿಹಾರ ಸಾಕು ವಿನೋದ ಸಾಕು! ಯಾವ ಸುಖ ಸಂತೋಷಗಳಿಂದೇನಾಗಬಹುದು?

ಚೆನ್ನ – ಮಹಾರಾಜ, ತಮಗೇಕೆ ಅದರ ಯೋಚನೆ ?

ಸಿದ್ಧಾರ್ಥ – ಮುಪ್ಪು ತಪ್ಪಿದ್ದಲ್ಲವಷ್ಟೇ ?

( ರೋಗಿಯು ಬರುವನು )

ರೋಗಿ – ಯಾರರೇ ಉಳಿಸಗೊರ‍್ರ್ಯ್ಯ ಎಪ್ಪಾ! ಬ್ಯಾನಿ ಭಾಳೈತಿ! ಹೊಟ್ಟ್ಯಾಗ ಅಲಗ ತಿರುವಿದಾಂಗ ಆಗತಾದರ‍್ಯೋ ಎಪ್ಪಾ!!

ಚೆನ್ನ – ಒಂದು ಅರಿಷ್ಟ ದಾಟಿತೆನ್ನುವದರಲ್ಲಿ ಮತ್ತೊಂದು ಬಂದಿತಲ್ಲಾ!

ಸಿದ್ಧಾರ್ಥ – ಚೆನ್ನಾ! ಆತ ಹಾಗೇಕ ಹಲುಬುತ್ತಾ ?

ಚೆನ್ನ – ಆತನು ಹಲುಬುವವರ ಸೋಗು ಮಾಡುತ್ತಿದ್ದಾನು

ಸಿದ್ಧಾರ್ಥ – [ಸಮೀಪ ಹೋಗಿ] ಎಲ್ಲಿ! ಎಲ್ಲಿಯ ಸೋಗು! ಈ ಪ್ರಾಣಿಯು ವ್ಯಥೆ ಪಡುವದು ಏನು ವೈಯಿಂದ! ಮೈಗೆ ತುಂಬ ಹುಣ್ಣು! ನಡೆಯಲಿಕ್ಕೆ ಶಕ್ತಿಯಿಲ್ಲ! ಹುಣ್ಣಿನ ಮೇಲೆ ನೊಣಗಳು ಮುಕರಿ ಕಡಿಯು-

ತ್ತಿವೆ! ಅಯ್ಯೋ! ಮೈ ಹೊಲಸು ನಾರುತ್ತಿದೆ! ಪಾಪ! ಹೇಗೆ ತಾಳು-ತ್ತಿದ್ದಾನು?

ಚೆನ್ನ – ತಾಳಲಿಕ್ಕೆ ಅದರಲ್ಲೇನಿದೆ? ರೂಢಿಯಾದರೆ ಎಲ್ಲಾ ಹಗುರೇ ಅನಿಸಿಬಿಡುತ್ತದೆ

ಸಿದ್ಧಾರ್ಥ – ಚೆನ್ನಾ! ನಿನಗೆ ಹೃದಯವಿಲ್ಲ ತಲೆಯಲ್ಲಿ ಬರೇ ಶುಷ್ಕ ಬುದ್ಧಿ ಮಾತ್ರ ಇದ್ದಂತೆ ತೋರುವದು (ರೋಗಿಯ ಬಳಿಗೆ ಹೋಗಿ) ಅಪ್ಪಾ, ನಿನಗೇನಾಗಿದೆ? ನೀನು ಇಷ್ಟು ಸಂಕಟಪಡುವದೇಕೆ?

ರೋಗಿ – ಎಪ್ಪಾ! ನಾ ಪರದೇಸಿ! ಭೂಮೀಮ್ಯಾಲೆ ನನಗ್ಯಾರೂ ಇಲ್ಲ! ಅಲ್ಲಿ ಇಲ್ಲಿ ಬಿದ್ದು ಜೀವಾ ಬಿಡೋ ಪಾಪೀನ ನೀ ಮಾತಾಡಿಸಿದಿ ಪುಣ್ಯಾತ್ಮಾ!

ಸಿದ್ಧಾರ್ಥ – ಅಳುವದೇಕೆ? ಹೇಳು ಏನಾಗಿದೆ? ಅಳಬೇಡ ನಿನ್ನ ಸಂಕಟಗಳನ್ನೆಲ್ಲ ಬಿಚ್ಚಿ ಹೇಳು ನಾನು ಆರೈಸುತ್ತೇನೆ

ರೋಗಿ – (ಕಣ್ಣೀರು ಸುರಿಸುತ್ತ) ಎಪ್ಪಾ! ನಾ ರೋಗಿ! ನಿನ್ನಂಥ ದೊಡ್ಮನಶ್ಯಾ ಸನಿ ಬರಬಾರ್ದು ನನ್ನ ಮೈ ಭಾಳ ನಾತ್ರಾದ! ನನ್ನಪ್ಪಾ ನನ್ನದು ನನಗೆ ಇರ್ಲಿ ನೀ ದೂರ ಸರಿ ನನ್ನಪ್ಪಾ! ನಾತ ಬರ್ತಾದ ಹೊಲಸು!

ಸಿದ್ಧಾರ್ಥ – ಅಪ್ಪಾ! ನೀನು ಆ ನಾತಿನಲ್ಲಿ ಮುಚ್ಚಿ ಹೋಗಿರುವಿ! ನಿನಗಿಂತ ನನಗೆ ಅದರ ಬಾಧೆ ಹೆಚ್ಚಿಗೆ ಆದೀತೆ?

ರೋಗಿ – ಪುಣ್ಯಾತ್ಮಾ! ದೇವರಂಥಾ ಮನುಷ್ಯ ನೀನು ನನ್ನಂಥ ಪಾಪಿಗಳಿಗೆ ಈ ಲೋಕದಾಗ ಯಾರು ನೋಡ್ತಾರೆಪ್ಪೊ! ಈ ಲೋಕದಾಗ ನೀ ಒಬ್ಬನೇ ನನ್ನ ಬಂಧು ಬಳಗ ಎಲ್ಲಾ!

ಸಿದ್ಧಾರ್ಥ – ಚೆನ್ನಾ, ಮನುಷ್ಯರೆಲ್ಲರಿಗೂ ಈ ಬಾಧೆ ತಪ್ಪುವಂತೆ ತೋರುವದಿಲ್ಲ

ಚೆನ್ನ – ಎಲ್ಲರಿಗೂ ಏತಕ್ಕೆ ಬಂದೀತು?

ಸಿದ್ಧಾರ್ಥ – ಛೀ ನಿನಗ ತಿಳಿಯದು! ನಾನೂ ಒಮ್ಮೆ ಹೀಗೆ ಆಗುವೆನಲ್ಲವೇ? ಇಂಥ ಸುಂದರಾಂಗವು ಒಮ್ಮೆ ರೋಗದಿಂದ ನಾರುತ್ತ ಬೀಳುವದಲ್ಲವೇ? ಯಶೋಧರೆಗೂ ಇದು ಇದ್ದುದೇ ಅಲ್ಲವೇ? (ಅಷ್ಟರಲ್ಲಿ

ಮತ್ತೇನನ್ನೊ ಕಂಡು) ಅಗೋ ! ಅದು ಏನು ಚೆನ್ನಾ ? ಅದು ಏನು !! ಆ ಮನುಷ್ಯನನ್ನು ಹಾಗೇಕೆ ಕಟ್ಟಿದ್ದಾರ ?

ಚೆನ್ನ – (ಸ್ವಗತ) ಅಯ್ಯೋ ! ಇಂದೇನು ಯಮಪುರದ ಸಂತೆಯೆ ನರೆದಂತಾಯ್ತಲ್ಲ ! (ಪ್ರಕಟ) ಅದು ಹೆಣ, ಮಹಾರಾಜ !

ಸಿದ್ಧಾರ್ಥ – ಇವನಿಗೇನಾಗಿದೆ ?

ಚೆನ್ನ – ಸ್ವಸ್ಥ ಆರಾಮವಾಗಿದೆ ಮಹಾರಾಜ !

ಸಿದ್ಧಾರ್ಥ – ಸುಖವಾಗಿದ್ದವನನ್ನು ಹೊತ್ತುಕೊಂಡು ಹೋಗುತ್ತಾರೆಯೇ ? ನೀನು ಸರಿ ನಾನೇ ಅವರನ್ನು ಕೇಳುವೆ ಅಪ್ಪಗಳಿರಾ, ಇವನಿಗೇನಾಗಿದೆ ?

ಜನರು – ಅಯ್ಯೋ ! ಪುಣ್ಯಾತ್ಮಾ ! ಈತ ನಮ್ಮನ್ನೆಲ್ಲ ದುಃಖದ ಮಡುವಿನಲ್ಲಿ ಮುಳುಗಿಸಿ ನಮ್ಮ ಕೈ ಬಿಟ್ಟು ಹೋದನಯ್ಯೋ !

ಸಿದ್ಧಾರ್ಥ – (ಸ್ವಗತ) ನಾನು ಕಥೆಯಲ್ಲಿ ಕೇಳಿದ ಮರಣವೆಂಬುದು ಇದೇ ಎಂದು ತೋರುತ್ತದ ! (ಪ್ರ) ತಿಳಿಯಿತು ! ಈತನನ್ನು ಸುಡುವಿರಿ, ಹೌದಲ್ಲವೇ ? ಹೌದಲ್ಲವೇ ?

ಜನರು – ಹೌದು ನನ್ನೊಡೆಯಾ !! ಬಂಗಾರದಂಥವನನ್ನು ಒಯ್ದು ಬೆಂಕಿ ಪಾಲು ಮಾಡಿ ಬರುತ್ತೇವೆ

ಸಿದ್ಧಾರ್ಥ – ಈ ಸಿದ್ಧಾರ್ಥನೂ ಒಮ್ಮೆ ಸಾಯುವವನೇ ಅಲ್ಲವೇ ? ನನ್ನ ಜೀವದ ಯಶೋಧರೆಯೂ ಕೂಡ ಸತ್ತು ಹೋಗುವವಳೇ ? (ನಡುಗಿ) ಅಹಹ್ಹಾ ! ಕೊನಗೆ ಈ ಗತಿಯೇ ಈ ದೇಹಕ್ಕೆ ? (ಸಿದ್ಧಾರ್ಥನು ಮೂರ್ಛೆ ಹೋಗುವನು ಚೆನ್ನನು ಶೈತ್ಯೋಪಚಾರ ಮಾಡಿ ಕರೆದುಕೊಂಡು ಹೋಗವನು )

## ೭ ನೇ ಪ್ರವೇಶ

ಶುದ್ಧೋದನ – ಯಾರು ಚೆನ್ನನೇನು ?

ಚೆನ್ನ – ಹೌದು ಮಹಾರಾಜ ಆತನೇ. .

ಶುದ್ಧೋದನ – ಎಲೋ ! ನಿನಗೆ ಬುದ್ಧಿಯಿಲ್ಲ !

ಚೆನ್ನ.– [ಮೋರೆ ಕಿವುಚಿ] ಹೌದು ಮಹಾಪ್ರಭೋ !

ಶುದ್ಧೋದನ – ಬೇರೆ ಹಾದಿಗೆ ಹೊರಳಿಸಬಾರದೇನೋ ನೀನು !

ಚೆನ್ನ – ನಾನು ಎಷ್ಟು ಯತ್ನ ಮಾಡಿದರೂ ಕುಮಾರರು ಕೇಳಲಿಲ್ಲ

ಶುದ್ಧೋದನ – ನನ್ನ ದುರ್ದೈವವು ಹಾಗೆ ಮಾಡಿಸಿತು ಹೋಗು ನನ್ನೆದುರಿಗೆ ನಿಲ್ಲಬೇಡ ನಡೆ

[ ಚೆನ್ನನು ನಡನಡಗುತ್ತ ಹೊರಯಾಗುವನು ಪರದೆ ಬೀಳುವದು ]

## ೮ನೇ ಪ್ರವೇಶ

[ ಉದ್ಯಾನದಲ್ಲಿ ಸಿದ್ಧಾರ್ಥನು ]

ಸಿದ್ಧಾರ್ಥ – ಆಗಲಿಕ್ಕಿಲ್ಲವೇ ? ಈ ಮುಪ್ಪು ರೋಗ ಮರಣಗಳನ್ನು ತಪ್ಪಿಸುವುದು ಆಗಲಿಕ್ಕಿಲ್ಲವೇ ?

ಯಶೋಧರೆ – [ಇಣಿಕಿ] ಅವ್ವ ! ಮುಖವು ತೀರ ಬಾಡಿ ಬೆಂಡಾಗಿದೆ ಏನು ಸಮಾಧಾನ ಹೇಳಲವ್ವ ಇವರಿಗೆ ? ಅಲ್ಲದೆ ನನ್ನ ಜೀವಕ್ಕೆ ಏನು ಸಮಾಧಾನ ಹೇಳಿಕೊಳ್ಳಲಿ ? (ಮುಂದೆ ಬಂದು) ಮಹಾರಾಜರೇ, ಏನಿದು ಒಣ ಚಿಂತೆ ? ಜನರಿರುವಂತೆ ನಾವೂ ನಾಲ್ಕು ದಿನ ಇದ್ದು ಹೋಗುವದು ! ವಿಚಾರಿಸಿದರೆ ಮರಣದ ಪ್ರಶ್ನೆ ಬಿಡಿಸಲಿಕ್ಕಾದೀತೆ ? ಅದು ನಮ್ಮ ಬುದ್ಧಿ ಶಕ್ತಿಗೆ ನಿಲುಕುವ ಮಾತಲ್ಲ !

ಸಿದ್ಧಾರ್ಥ – ಯಶೋಧರೆ ನಾನೂ ನೀನೂ ಕೊನೆಗೆ—

ಯಶೋಧರೆ – (ಮನ) ಮಹಾರಾಜರ ತಲೆ ಕಾಯ್ದು ಹೋಗಿದೆ ಇವರನ್ನು ಮಾತಾಡಿಸಿ ಪ್ರಯೋಜನವಿಲ್ಲ (ಕೂಗಿ) ದಾಸೀ,

ದಾಸಿ – (ಬಂದು) ಏನಪ್ಪಣೆ ಅಮ್ಮಾ?

ಯಶೋಧರೆ – ಬಾ ಹೀಗೆ, ನಾವಿಬ್ಬರೂ ಹೂಗಳನ್ನು ತರೋಣ ಅವುಗಳಿಂದಾದರೂ ಮಹಾರಾಜರ ತಪ್ತ ಮಸ್ತಕವು ತಣ್ಣಗಾದೀತು (ಹೋಗುವರು) ಕರ್ಣಪೂರಕವನ್ನು ಮಹಾರಾಜರು ಬಹಳ ಪ್ರೀತಿಸುವರು ಹಿಂದಕ್ಕೆ ನನ್ನ ಕಿವಿಗೆ ಅದನ್ನಿಡಿಸಿ ಎಷ್ಟೋ ಆನಂದಪಟ್ಟರು ! ಈ ಹೊತ್ತು ಅದೇ ಪ್ರಯೋಗವನ್ನು ಅವರ ಮೇಲೆಯೇ ಮಾಡಬೇಕು (ಹೂಗಳನ್ನಾರಿಸಿ ಕಟ್ಟುತ್ತ) ಹೂಗಳೇ ! ಇಂದು ನನ್ನ ಮೊರೆಯನ್ನು ಲಾಲಿಸಿರಿ ! ದಾಸೀ, ಹೊತ್ತು ಹೋಗುತ್ತದೆ ಬೇಗ ಮುಗಿಸು (ನಗೆ ಮೊಗದಿಂದ) ಗಿಡದಲ್ಲಿ ಮಿಕಿ ಮಿಕಿ ಕಣ್ಣುಬಿಡುತ್ತ ಕುಳ್ಳಿರುವ ಹೂಗಳು ಇಂಥ ಗಂಭೀರರ ಕಿವಿ ಯಲ್ಲಿ ಕುಳಿತೆವೆಂಬು ಎಷ್ಟು ನಗುತ್ತವೆ ನೋಡಿರಿ ಅಹ್ಹ ! ಕೂಸಿನ

ನಗೆ! ಈ ಚೆಲುವಿಕೆಯನ್ನು ಗಾಳಿಯೂ ಕೂಡ ಒಂದು ಗಳಿಗೆ ನಿಂತು ನೋಡಬೇಕು! ಮುಳುಗಿದ ಸೂರ್ಯನು ಚಂದ್ರಮನಾಗಿ ಕದ್ದು ಉದಯಿಸಿ ನೋಡಬೇಕು! ಅಹ! ಆಗೋ ಮುಗಿಲಲ್ಲಿ ದೇವತೆಗಳು ನಿಮ್ಮ ಸೌಂದರ್ಯವನ್ನು ನೋಡುವದಕ್ಕೆ ಕರದೀಪಗಳನ್ನು ಹಿಡಿದುಕೊಂಡು ಬರುತ್ತಿರುವಂತೆ ಚಿಕ್ಕೆಗಳು ಮೂಡಹತ್ತಿದವು! ಚಿಕ್ಕೆಗಳ ಕಣ್ಣನ್ನೂ ಕುಕ್ಕಿಸುವ ನಿಮ್ಮ ಸೌಂದರ್ಯಕ್ಕೆ ಸೂರ್ಯನು ಓಡಿ ಹೋಗಿ ಅಡಗಿಕೊಂಡನು

**ಸಿದ್ಧಾರ್ಥ** – ಪ್ರಿಯೇ, ನೀನು ಎಷ್ಟು ಸಂತೋಷದಿಂದ ಮಾತನಾಡುತ್ತಿ! ನನಗ ಒಂದಿಷ್ಟು ಸೊಗಸಿಲ್ಲ ನೋಡು ಮನಸ್ಸಿಗೆ! ಈ ಬಿದ್ದು ಹೋಗುವ ಶರೀರಕ್ಕೆ ಇಷ್ಟೇಕೆ ಜಂಭ? ಸತ್ತು ಹೋಗುವ ಈ ಸಿದ್ಧಾರ್ಥನನ್ನು ಏಕಿಷ್ಟು ಪ್ರೀತಿಸುವದು! ಮಿಂಚಿನಂತೆ ತೋರಿ ಅಡಗುವ ಈ ಸೌಂದರ್ಯಕ್ಕೆ ಇಷ್ಟೇಕೆ ಮೋಹ! ಪ್ರಿಯೇ, ನೀನು ಹುಚ್ಚಿ ನೋಡು! ನನ್ನನ್ನು ಮರಣದಿಂದ ಉಳಿಸಬಲ್ಲೆಯಾ? ನಾಳೆ ನನಗೆ ಮುಪ್ಪು ಒರಬಾರದಂತೆ ಔಷಧ ಕೊಡಿಸಬಲ್ಲೆಯಾ? ನಾಳೆ ನನ್ನ ಶವನನ್ನು ಇಂದಿನಂತೆ ಬಣ್ಣಿಸುವದಕ್ಕೆ ಆಗುವದೇ ನಿನ್ನಿಂದ? ಹೇಳು!

**ಯಶೋಧರೆ** – (ಮನ) ಅಪ್ಪಯ್ಯಾ! ನನ್ನ ಸರ್ವ ಪ್ರಯತ್ನವೂ ವ್ಯರ್ಥವಾಯಿತು! (ಕುರಿತು) ದಾಸೀ ಇಲ್ಲಿ ಬಾ!

**ದಾಸಿ** – ಇದೋ ಬಂದೆನಮ್ಮಾ

**ಯಶೋಧರೆ** – (ಕಿವಿಯಲ್ಲಿ) ಹೋಗು ಶುದ್ಧೋದನ ಮಹಾರಾಜರಿಗೆ ಇಲ್ಲಿಯವರೆಗೆ ಬರಬೇಕಂದು ವಿಜ್ಞಾಪಿಸಿಕೊಂಡಿರುವೆನೆಂದು ಹೇಳು

**ದಾಸಿ** – ಅಮ್ಮಾ ಈಗಲೇ ಹೊರಟೆನು (ಹೋಗುವಳು)

**ಸಿದ್ಧಾರ್ಥ** – ಆಗಲಿಕ್ಕಿಲ್ಲವೇ? "ಮುಪ್ಪು! ಬೇನೆ!! ಸಾವು!!!" ಇವುಗಳನ್ನು ತಪ್ಪಿಸುವದು ಮನುಷ್ಯನಿಂದ ಆಗಲಿಕ್ಕಿಲ್ಲವೇ?

**ಯಶೋಧರೆ** – ದೈವವೇ, ನಿನಗೆ ಸೆರಗೊಡ್ಡಿ ಬೇಡಿಕೊಳ್ಳುವೆನು ನನ್ನ ಪ್ರಾಣಾಧಿಕರನ್ನು ಈ ಪರಿ ಪೀಡಿಸಬೇಡ (ದಾಸಿ ಬರುವಳು ಬಂದರೆ? ಎಂದು ಕೇಳಿದದಕ್ಕೆ ಸನ್ನೆಯಿಂದೇ ಉತ್ತರ ಸಿಗುವದು) ಮಹಾರಾಜರು ಬಂದರು ಬನ್ನಿರಿ ಹೀಗೆ (ಆತುರದಿಂದ) ಹಿರಿಯರ ಪಾದಕ್ಕೆರಗುವೆ.

ಶುದ್ಧೋದನ - ( ಆಶೀರ್ವದಿಸಿ ) ಮಗೂ, ಸುಮಂಗಲೆಯಾಗು! (ಹೊರಳಿ) ಸಿದ್ಧಾರ್ಥಾ, ಹೀಗೇಕೆ ಬಿದ್ದುಕೊಂಡಿರುವಿ?

ಸಿದ್ಧಾರ್ಥ – "ಮುಪ್ಪು-ಬೇನೆ ಸಾವು!!!"

ಶುದ್ಧೋದನ – ಸಿದ್ಧಾರ್ಥಾ! ನನ್ನ ದುರ್ದೈವವನ್ನು ನೀನು ಪರಿಹರಿಸುವದಿಲ್ಲವೇ?

ಸಿದ್ಧಾರ್ಥ – "ದುಃಖ-ಮರಣ!!!"

ಶುದ್ಧೋದನ – ತಂಗೀ, ಯಶೋಧರೆ! ಈಗ ಯಾರಿಗೆ ಯಾರು ಸಂತಯಿಸಬೇಕೆಂಬುದೇ ತಿಳಿಯದಂತಾಯ್ತು ಮೊದಲು ಈತನನ್ನು ಅರಮನೆಗೆ ಕರೆದುಕೊಂಡು ಹೋಗುವಾ

(ಹೋಗುವರು)

## ೯ ನೇ ಪ್ರವೇಶ

( ಶಯ್ಯಾಗೃಹದಲ್ಲಿ ಸಿದ್ಧಾರ್ಥ ಮಲಗಿದ್ದಾನೆ )

ಸಿದ್ಧಾರ್ಥ – (ಥಟ್ಟನೆ ಎದ್ದು) ಸಪ್ತ ಸಾಗರಗಳನ್ನು ಪರ್ಯಟಿಸಿ ಮುತ್ತು ಮಾಣಿಕಗಳನ್ನು ಗಳಿಸಿ ತರುವವರಂತೆ ಹೊರಟಿರುವೆನೆಂದು! ದುಃಖ ಮರಣಗಳನ್ನಡಗಿಸುವ ಚಿಂತಾರತ್ನವನ್ನು ಗಳಿಸಿತರಲು ಹೊರಟಿರುವೆನೆಂದು! ಮುಪ್ಪು-ಮರಣ-ರೋಗಗಳ ದವಡೆಯಲ್ಲಿರುವ ಈ ಸಂಪತ್ತೂ, ಸವಿಸುಖವೂ ಬೇಡವೆನಗೆ! ಮಡದಿ ಮಕ್ಕಳನ್ನೂ ಕೂಡ ಈಗ ಲೆಕ್ಕಿಸಿ ಫಲವಿಲ್ಲ ನನ್ನ ವಾಂಛಿತ ಸಂಪತ್ತು ನನಗೆ ಲಭಿಸಿದ ಮೇಲೆ ಇವರಿಗೂ ಅದರಲ್ಲಿ ಪಾಲು ಇದ್ದೇ ಇರುತ್ತದೆ (ಎದ್ದು ಹೋಗುವಾಗ ಮಡದಿ ಮಕ್ಕಳನ್ನು ನಿಟ್ಟಿಸಿ) ಓಹೋ, ನನ್ನ ಯಶೋಧರೆ! ಮುದ್ದು ಮಗು! ರಾಹುಲ! ಇವರನ್ನು ಬಿಟ್ಟುಕೊಟ್ಟೇ ಹೋಗಬೇಕ? ಮುದ್ದು ಮಗುವಿನ ಸಲುವಾಗಿ ಕರುಳು ತೊಡಕಿತಲ್ಲ! ಇವರನ್ನು ಬಿಟ್ಟು ಹೋದರೆ ? ನನ್ನ ಮನಸ್ಸನ್ನೇ ಚಂಚಲಗೊಳಿಸುವ ಈಕೆಯನ್ನು ಎಬ್ಬಿಸಲೇ ಬಾರದು ಎಬ್ಬಿಸಿದರೆ ಮನಸ್ಸು ತಿರುಗೀತು ಮತ್ತೆ! ಬೇಡ ಬೇಡ! ಎಬ್ಬಿಸುವದು ಬೇಡ (ಮರಳಿ) ಕೂಸಿಗಾದರೂ ಒಂದು ಮುದ್ದು ಬೇಡವೇ? . ಕೂಸು ಎಚ್ಚತ್ತರೇ? (ಮುಂದೆ ಹೊರಟು) ಕೂಸಿಗೆ ಎಚ್ಚರಾಗುವ ಬದಲು, ಯಶೋಧರೆಗೆ ಎಚ್ಚರಾದರೆ! ಮನಸ್ಸೇ, ಗಟ್ಟಿಯಾಗಬಾರದೇ? ಏಕೆ

ನನ್ನನ್ನು ಹಿಂದಕ್ಕೆಳೆಯುವೆ? ಹೆಂಡಿರು ಮಕ್ಕಳಲ್ಲಿ ಏಕೆ ತೊಡಗಿಕೊಳ್ಳುವೆ? ತಿರುಗು ತಿರುಗು! ಈಗಲೇ ಹೊರಗೆ ಹೋಗಬೇಕು

ಓಂ! ಓಂ!! ಓಂ!!!

(ಹೋಗುವನು)

## ೧೦ನೇ ಪ್ರವೇಶ

(ಅರಣ್ಯದಲ್ಲಿ ಚೆನ್ನನೂ, ಸಿದ್ಧಾರ್ಥನೂ)

ಸಿದ್ಧಾರ್ಥ – ಚೆನ್ನಾ, ಈಗಲೇ ಬಹುದೂರ ಬಂದಂತಾಯಿತು, ಹಿಂದಿರುಗಿನ್ನು

ಚೆನ್ನ – ಆಗಲಿ, ತಮ್ಮಿಷ್ಟದಂತೆ ಹೊರಳುವಾ

ಸಿದ್ಧಾರ್ಥ – ಇಗೋ, ಈ ಕುದುರೆಯನ್ನು ತೆಗೆದುಕೊಂಡು ಹೋಗು

ಚೆನ್ನ – ನೀವು?

ಸಿದ್ಧಾರ್ಥ – ನಾನು ಬರಲಾರೆ

ಚೆನ್ನ – ನಾನು ಹೋಗಲಾರೆ

ಸಿದ್ಧಾರ್ಥ – ಪ್ರಪಂಚದ ದುಃಖ-ಬಾಧೆಗಳ ಸ್ಪರ್ಶವಿಲ್ಲದ ಸುಖದ ಮಾರ್ಗವನ್ನು ಕಾಣಲಿಕ್ಕೆ ಹೊರಟುಹೋದನೆಂದು ಹೇಳು

ಚೆನ್ನ – ಮಹಾರಾಜ, ಮುಪ್ಪಿನ ತಂದೆಯನ್ನು ಹೀಗೆ ನಡುನೀರಿನಲ್ಲಿ ಬಿಟ್ಟು ದುಃಖಸಾಗರದಲ್ಲಿ ನೂಕುವದು ಸರಿಯಾದದ್ದೇ?

ಸಿದ್ಧಾರ್ಥ – ತಂದೆಯು ದುಃಖಿಸುವ ಕಾರಣವಿಲ್ಲ ಏಕೆಂದರೆ ಮಗನು ಹೆಚ್ಚಿನ ಸೌಖ್ಯವನ್ನು ಪಡೆಯಬೇಕೆನ್ನುವದರಿಂದ ಅವರಿಗೆ ಸಂತೋಷವೇ ಆಗಬೇಕು

ಚೆನ್ನ – ಈ ನಿಮ್ಮ ಆಕಸ್ಮಿಕವಾದ ನಿಷ್ಕ್ರಮಣದ ಸುದ್ದಿಯನ್ನು ಕೇಳಿ ಯಶೋಧರಾದೇವಿಗೆ ಹೇಗಾದೀತು? ಮುಗಿಲೇ ಬಿದ್ದಂತಾಗಲಿಕ್ಕಿಲ್ಲವೇ ಮೈಮೇಲೆ?

ಸಿದ್ಧಾರ್ಥ – ಚೆನ್ನಾ, ನಾನೊಬ್ಬನು ಕಷ್ಟಬಟ್ಟು ಸುಖದ ಮಾರ್ಗವನ್ನು ಶೋಧಿಸಿದರೆ ಯಶೋಧರೆಯಂಥ ಎಷ್ಟೋ ಜನರು ಸುಖಿಗಳಾದಾರು

ಚೆನ್ನ – ಮಹಾರಾಜರೇ, ನಿಮ್ಮ ಮನಸ್ಸು ಹೇಗೆ ಇಷ್ಟು ಕಲ್ಲಿನಂತಾಯ್ತು? ಮುದ್ದು ಮಗುವಿನ ನೆನಪು ನಿಮಗಾಗುವದಿಲ್ಲವೇ?

ಸಿದ್ಧಾರ್ಥ – ಚೆನ್ನಾ, ಇದನ್ನೆಲ್ಲ ಕೆದರಿ ನನ್ನ ಮನವನ್ನು ಕಲಕಿಸಬೇಡ ನಾನು ರಾಜಧಾನಿಯನ್ನು ಬಿಡುವ ಮೊದಲು ಈ ಎಲ್ಲ ವಿಚಾರಗಳನ್ನು ಮಾಡಿಯೇ ಇರುವೆನು

ಚೆನ್ನ – ಮಹಾರಾಜ, ನಾನು ತಮ್ಮ ಸೇವಕ–ಪಾದಸೇವಕನಲ್ಲವೇ? ನಿಮ್ಮ ಸೇವೆ ಮಾಡುವಲ್ಲಿ ಪ್ರಮಾದಗಳಾಗಿದ್ದರೆ ಕ್ಷಮಿಸಿರಿ ಅರಮನೆಗೆ ಮರಳಿರಿ. (ಅಡ್ಡಬೀಳುವನು)

ಸಿದ್ಧಾರ್ಥ – ಚೆನ್ನಾ, ನೀನೇನು ಹುಚ್ಚನೇ? ಏಕೆ ನನ್ನನ್ನು ತಡೆಯುವಿ? ನಿನ್ನ ಸೇವೆಗೆ ನಾನು ತುಂಬಾ ಮೆಚ್ಚಿರುವೆ ನಾನು ಪಡೆಯಬೇಕೆನ್ನುವ ಸುಖವು ನಿನಗೂ ಸಿಗಲಿ! ಮೋರೆ ಸಪ್ಪಗೆ ಮಾಡಬೇಡ. ಏಳು! ನನಗೂ ದುಃಖವೆನಿಸುತ್ತದೆ! ನೋಡು, ನಿನ್ನ ಒಡೆಯನನ್ನು ದುಃಖಪಡಿಸುವದು ನಿನಗೆ ಇಷ್ಟವೇ?

ಚೆನ್ನ – (ಕಣ್ಣೀರು ಸುರಿಸುತ್ತ) ಹಾಗೇನೂ ಇಲ್ಲ ಮಹಾರಾಜ! ತಮಗೆ ಸಂತೋಷವಾಗಲೆಂದೇ ನನ್ನ ಆಸೆಯು

ಸಿದ್ಧಾರ್ಥ – ಚೆನ್ನಾ, ದುಃಖಿಸಬೇಡ ಶಾಂತನಾಗು ಮರಳು (ರಂಬಿಸುವನು)

ಚೆನ್ನ – ಮಹಾರಾಜ, ನಾನು ಮಹಾಪಾಪಿ! ಮಹಾ ಚಂಡಾಳ! ರಾಕ್ಷಸ!! ರಾಜಪುತ್ರನನ್ನು ಕಾನನ ಸೇರಿಸಲಿಕ್ಕೆ ನಿಂತ ಮಹಾಪಾಪಿ!! ಅಯ್ಯೋ ನನ್ನ ಜನ್ಮವೇ!!!

ಸಿದ್ಧಾರ್ಥ – (ಮೈಮೇಲಿನ ಉಡುತೊಡುವುಗಳನ್ನು ತೆಗೆದಿತ್ತು) ಇಗೋ ಚೆನ್ನಾ, ಇವುಗಳನ್ನು ತೆಗೆದುಕೊಂಡು ಹೋಗು!

ಚೆನ್ನ – ಬರಿಮೈಯಿಂದ ಹೊರಟರೆ ಸುಕುಮಾರವಾದ ಶರೀರದ ಗತಿಯೇನು? ಗಾಳಿ ಮಳೆ ಬಿಸಿಲುಗಳಲ್ಲಿ ಆಸರವೇನು? ನನ್ನೊಡೆಯಾ, ಇದನ್ನೆಲ್ಲ ಮಹಾರಾಜರ ಮುಂದೆ ಹೇಳಿದರೆ ಅವರು ಎಷ್ಟು ತಳಮಳಿಸಬಹುದು! ಈ ಕೆಲಸವನ್ನು ಮಾಡುವದಕ್ಕೆ ಆಗದು ಕ್ಷಮಿಸಿರಿ

ಸಿದ್ಧಾರ್ಥ – (ರಂಬಿಸುತ್ತ) ಚೆನ್ನಾ, ನಿನ್ನೊಡೆಯನಿಗೆ ಒಳಿತಾಗುವದನ್ನು

ನೀನು ಮಾಡಲಾರೆಯಾ? ಇಗೋ, ನಾನು ಹೇಳುವದನ್ನು ಕೇಳು ಮೊದಲು ಅಳುವದನ್ನು ಬಿಟ್ಟು ಸುಮ್ಮನಾಗು ಆಮೇಲೆ ಆರಿವೆಗಳನ್ನು ಕೈಯಲ್ಲಿ ತೆಗೆದುಕೊ!

ಚೆನ್ನ .– (ತಳಮಳಿಸಿ) ಈ ಸೇವಕನು ಇಂಥ ದುಷ್ಕೃತ್ಯವನ್ನು ಎಂದಿಗೂ ಮಾಡಲಾರನು ಮಹಾರಾಜ, ಈಗಲೇ ನಾನು ತಲೆಯೊಡಕೊಳ್ಳುವೆನು

ಸಿದ್ಧಾರ್ಥ – ಚೆನ್ನಾ, ಈ ವಸ್ತ್ರಾಲಂಕಾರವನ್ನು ಒಯ್ಯಲಿಕ್ಕೆ ಒಪ್ಪದಿದ್ದರೆ ಬಿಡು! ನಾನು ಮಾತ್ರ ಇವನ್ನು ಇಲ್ಲಿ ಚೆಲ್ಲಿಕೊಟ್ಟು ಮುಂದಕ್ಕೆ ಹೊರಡುವೆನು ಆಮೇಲೆ ನಿನಗೆ ಬಲ್ಲಂತೆ ಮಾಡು

ಚೆನ್ನ – ಮಹಾರಾಜರೆ, ಕಾದ ಸೀಸನ್ನು ತಲೆಯ ಮೇಲೆ ಎರೆಯುತ್ತೀರಾ?

ಸಿದ್ಧಾರ್ಥ – ತೆಗೆದುಕೋ ಇವುಗಳನ್ನು! (ಕೊಡುವನು)

ಚೆನ್ನ – ಉಪಾಯವಿಲ್ಲ! ತೆಗೆದುಕೊಳ್ಳುವೆ (ಹಾಗೇ ಮಾಡುವನು)

ಸಿದ್ಧಾರ್ಥ – ಚೆನ್ನಾ, ಇಷ್ಟು ದಿನ ನನ್ನ ಸೇವೆಯನ್ನು ಚೆನ್ನಾಗಿ ಮಾಡಿದಿ ಹಿರಿಯರಂತೆ ನನ್ನ ಹಿತವನ್ನು ನೋಡಿದಿ. ನಿನ್ನ ಋಣ

ಚೆನ್ನ – (ತಟ್ಟನೆ) ಮಹಾರಾಜ! ಹೀಗೆ ಉಚ್ಚರಿಸಬೇಡಿರಿ ಕೈ ಮುಗಿಯುತ್ತೇನೆ.

ಸಿದ್ಧಾರ್ಥ,– ಬಿಡು, ಪ್ರೀತಿಯಿರಲಿ

ಚೆನ್ನ – (ನೋಡಿ) ಅಯ್ಯೋ ರಾಜಕುಮಾರಾ! ಈ ವಿರೂಪವನ್ನು ತೋರಿಸಲಿಕ್ಕೆಂದೇ ನನ್ನನ್ನಿಲ್ಲಿ ಕರೆತಂದೆಯಾ? ನವರತ್ನಗಳಿಂದ ಕೆತ್ತಲ್ಪಟ್ಟ ಕಿರೀಟವನ್ನು ಧರಿಸುವ ತಲೆಯು ಬೋಳಾಗಿರಬೇಕೆ? ಹವಳ ಮುತ್ತುಗಳಲ್ಲಿ ನಡೆದಾಡುವ ಪಾದಗಳು ಮುಳ್ಳು ಕಲ್ಲುಗಳನ್ನು ತುಳಿಯುತ್ತ ಸಾಗಬೇಕೆ? ಅಯ್ಯೋ! (ಅಳುವನು)

ಸಿದ್ಧಾರ್ಥ – (ಬೆನ್ನು ಚಪ್ಪರಿಸಿ) ದುಃಖಿಸಬೇಡ ಹೋಗಿನ್ನು ನಾನು ಸುಖದ ಮಾರ್ಗವನ್ನು ಹುಡುಕಲಿಕ್ಕೆ ಹೋರಡುತ್ತೇನೆ

ಚೆನ್ನ – ಹಾ! ವಿಧಿಯೇ!! ಹಾ! ವಿಧಿಯೇ!! (ಎಂದು ದುಃಖಿಸುತ್ತಿರುವನು)

## ೧೧ನೇ ಪ್ರವೇಶ

( ಅರಮನೆ ಶೋಕಾಕುಲನಾದ ಶುದ್ಧೋದನನು )

ಸೇವಕ – (ಬಂದು) ಪ್ರಭುಗಳೇ, ಬಾಗಿಲಲ್ಲಿ ಚೆನ್ನನು ಬಂದಿರುವನು, ತಮ್ಮ ಅಪ್ಪಣೆಯಾದರೆ ಒಳಗೆ ಬರುವನು

ಶುದ್ಧೋದನ – ಅಂ, ಚೆನ್ನನು ಬಂದಿರುವನೇ ? ಈಗಲೇ ಅವನನ್ನು ಒಳಗೆ ಬರಮಾಡು

ಸೇವಕ – ಅಪ್ಪಣೆ (ಹೋಗುವನು)

ಶುದ್ಧೋದನ – ಚೆನ್ನನು ಬಂದಿದ್ದರೆ ಕುಮಾರನೂ ಬಂದಿರಲೇ ಬೇಕು!

ಚೆನ್ನ – (ಬಂದು) ಒಡೆಯಾ ! (ವಂದಿಸುವಷ್ಟರಲ್ಲಿ)

ಶುದ್ಧೋದನ .– (ಸಂಶಯ) ಏಕೆ, ಕುಮಾರನೆಲ್ಲಿ ? ನಿನ್ನ ಮೊಗವೇಕೆ ಕಂದಿದೆ ???

ಚೆನ್ನ – ಅಯ್ಯೋ, ಏನು ಹೇಳಲಿ ! (ದುಃಖಿಸುವನು )

ಶುದ್ಧೋದನ – ಏನಾಯ್ತೋ ಚೆನ್ನಾ ! ಏನಾಯ್ತು ಬೇಗನೇ ಹೇಳು ! ನನ್ನ ಮಸ್ತಕವು ಸೀಳುತ್ತಿದೆ ಬೇಗನೇ ಹೇಳು ಕುಮಾರನು ಬರಲಿಲ್ಲ ವೇಕೆ ? ಹೇಳು !!

ಚೆನ್ನ – (ಮಿಡುಕುತ್ತ) ಏನು ಹೇಳಲಿ ? ಕುಮಾರರು ಸುಖದ ಮಾರ್ಗವನ್ನು ಶೋಧಿಸಲಿಕ್ಕೆಂದು ಹೊರಟುಹೋದರು ( ಉಡುಗೆಗಳನ್ನೆಲ್ಲ ತೆಗೆದಿಟ್ಟು ) ಇಕ್ಕೊಳ್ಳಿರಿ, ಮೈಮೇಲಿನ ವಸ್ತ್ರಗಳನ್ನೆಲ್ಲ ತಗೆದುಕೊಟ್ಟು ಸಂನ್ಯಾಸಿಯಂತೆ ಹೋದರು !

ಶುದ್ಧೋದನ – (ಬೆಚ್ಚಿಬಿದ್ದು) ಅಯ್ಯೋ-ಅಯ್ಯೋ ! ಅಯ್ಯಯ್ಯೋ !! ನನ್ನ ಪ್ರಾಣಾಧಾರಾ !!! ಕೊನೆಗೆ ದುರ್ದೈವಕ್ಕೇ ಜಯವು ಸಿಕ್ಕಿತೇ !!! ಚೆನ್ನಾ, ನೀನು ತಡೆಗಟ್ಟಲಿಲ್ಲವೇಕೆ ?

ಚೆನ್ನ – ನನ್ನ ಯತ್ನವೆಲ್ಲ ನಿರರ್ಥಕವಾಯ್ತು

ಶುದ್ಧೋದನ – ಅಯ್ಯೋ ! ವಿಧಿಯೇ !!! ನನ್ನ ಅರಗಿಳಿಯಿಲ್ಲದ ಪಂಜರದಲ್ಲಿ ನಾನು ಹೇಗೆ ಬದುಕಲಿ ? ಅಯ್ಯೋ, ನನ್ನ ಹೃದಯ ಕಮಲವನ್ನರಳಿಸುವ ಸೂರ್ಯದೇವನು ಮುಳುಗಿ ಕತ್ತಲೆ ಕೆಡವಿದನೇ ? ನನ್ನ

ಬಲಗೈ ಕಳಚಿ ಹೋಯ್ತೇ ? ದೇವಾ, ಇದೇನು ಮಾಡಿದೆ ? ನಿನ್ನಲ್ಲಿ ಇದೇ ಬೇಡಿ ಬಂದಿದ್ದೆನೆ ? ( ಎಚ್ಚರ ತಪ್ಪಿ ಬೀಳುವನು ಚೆನ್ನನೂ, ಸೇವಕರೂ ಆರೈಸುವರು )

## ೧೨ನೇ ಪ್ರವೇಶ

(ಅರಣ್ಯ ಧ್ಯಾನಸ್ಥನಾದ ಸಿದ್ಧಾರ್ಥ)

ಸಿದ್ಧಾರ್ಥ – ಕರ್ಮವೇ, ನೀನು ಎಷ್ಟು ನಿರಾಶೆಗೊಳಿಸಿದರೂ ನನ್ನ ಮನಸ್ಸನ್ನು ಕದಲಿಸುವದಿಲ್ಲ ಹೇಡಿ ನಾನಲ್ಲ ! ನಿನ್ನನ್ನು ಇದುರಿಸಲಿಕ್ಕೆಂದು ಈ ರಣಕ್ಷೇತ್ರದಲ್ಲಿ ನಿಂತಿರುವೆ ಇನ್ನು ರಣಹೇಡಿಯಂತೆ ಸೋತು ಹಿಂದಿರುಗುವವನಲ್ಲ ! ( ವಿಚಾರ )

(ತೆರೆಯಲ್ಲಿ) ಅಪ್ಸರೆಯರೇ, ಸಿದ್ಧಾರ್ಥನ ತಪಸ್ಸನ್ನು ಕೆಡಿಸಲಿಕ್ಕೆ ನಿಮ್ಮಿಂದಲೂ ಆಗಲಿಲ್ಲವೇ ? ಬಿಡಿರಿ, ನಾನೇ ಹೊರಡುವೆ

ಮಾರ – (ಬಂದು) ಎಂಥ ಆಜಾನುಬಾಹುವೀತನು ! ಸುರಸುಂದರಿಯರ ಸೊಬಗಿಗೆ ಮರುಳಾಗಲಿಲ್ಲ ! ಹುಲಿ ಕರಡಿಗಳಿಗೆ ಹೆದರಲಿಲ್ಲ ! ಹಸಿವೆ ನೀರಡಿಕೆಗಳನ್ನು ಲೆಕ್ಕಿಸಲಿಲ್ಲ ! ಬೇನೆ ಬೇಸರಿಕೆಗಳಿಗೆ ಬೆದರಲಿಲ್ಲ ! ದುರಾಸೆ, ದುರ್ಭಾವನೆಗಳಿಗೆ ಬಲಿಬೀಳಲಿಲ್ಲ ! ಎಂಥ ಉಗ್ರ ತಪವಿದು !! ಸೋತೆ ಸೋತೆ ! ಶರಣು ಶರಣು ! (ಎಂದು ಮರೆಯಾಗುವನು)

ಸಿದ್ಧಾರ್ಥ – (ಸಂತೋಷದಿಂದ) ಏನಿದು ! ಕಾಮನ ಬಾಣಕ್ಕೂ ಹದರದ ಮನಸ್ಸು ಈಗ ಆನಂದದ ಸುಳಿಗಾಳಿಯಿಂದ ಮಿದುವಾಗಿ ಬಾಗತೊಡಗಿತಲ್ಲ ! ಸುರಯುವತಿಯರ ನರ್ತನಕ್ಕೆ ಅಗಲಾಡಲಾರದ ನನ್ನ ಚಿತ್ತವೀಗ ಸಂತೋಷಸಾಗರದ ತೆರೆಗಳಲ್ಲಿ ತೇಲಾಡಹತ್ತಿತಲ್ಲ ! ಅಂತರಂಗದ ಮೊಗ್ಗೆಯೀಗ ಗುಡುಗು ಸಿಡಿಲುಗಳ ಗರ್ಜನೆಗೆ ಅರಳಿತಲ್ಲ !! ಈ ಆನಂದವು ಬಂದುದೆಲ್ಲಿಂದ ? (ಮೇಲೆ ನೋಡಿ) ಅಗೋ, ಆ ತೇಜಸ್ಸು ! ಅದೇ ಆನಂದದ ಝುರಿ ! ಸಾರ್ಥಕ !! ಸಾರ್ಥಕ !! ನನ್ನ ಜನ್ಮವಿಂದು ಸಾರ್ಥಕವಾಯ್ತು ಸುಖದ ಮಾರ್ಗವು ಸಿಕ್ಕಿತು ನಿಜಸುಖವು ನನ್ನ ಕರತಲಾಮಲಕವಾಯ್ತು ಮೋಕ್ಷವು ಈ ಮೃತ್ಯುಲೋಕದಲ್ಲೇ ಸಿಕ್ಕಿತು ! ಧನ್ಯೋಹಂ ಧನ್ಯೋಹಂ !!

[ ತೆರೆ ಬೀಳುವದು ]

## ೧೩ ನೇ ಪ್ರವೇಶ

( ಅರಮನೆಯಲ್ಲಿ ಯಶೋಧರೆ ಶುದ್ಧೋದನ-ಮಂತ್ರಿ )

ಯಶೋಧರೆ – ಬಿದ್ದುಕೊಂಡು) ನನ್ನ ಪ್ರಾಣದೊಡೆಯಾ, ನನ್ನ ಜೀವೇಶ್ವರಾ, ನನ್ನ ಕೈಬಿಟ್ಟೆಯಾ!

ಶುದ್ಧೋದನ – ತಂಗೀ! ತಳಮಳಿಸಬೇಡ ನನ್ನ ಹೊಟ್ಟೆಯಲ್ಲಿ ಇನ್ನಿಷ್ಟು ಕಿಚ್ಚನ್ನು ಸುರುವಬೇಡೆನ್ನ ಮಗೂ! ನೀನು ಆತನಿಗೆ ಮಾಡಿದ ಸೇವೆಯು ಎಂದಿಗೂ ನಿಷ್ಫಲವಾಗಲಾರದೆಂದು ನನ್ನ ಶ್ರದ್ಧೆಗೆ ತೋರುತ್ತಿದೆ

ಮಂತ್ರಿ – ಅಮ್ಮಾ! ಕುಮಾರನನ್ನು ಉಳಿಸಿಕೊಳ್ಳುವದಕ್ಕೆಂದು ಪಟ್ಟ ಪರಿಕಷ್ಟವು, ಅದು ಮಹಾತಪೋಯಜ್ಞವೆಂದೇ ನನ್ನ ಭಾವನೆ ನಿಮ್ಮ ತಪಸ್ಸು ಎಂದಿಗೂ ನಿಷ್ಫಲವಾಗಲಿಕ್ಕಿಲ್ಲೆಂದು ನನಗೂ ತೋರುತ್ತಿದೆ

ಯಶೋಧರೆ – ಏನೋ ಹಿರಿಯರಾದ ನಿಮ್ಮೆಲ್ಲರ ಅಂತಃಕರಣದಲ್ಲಿ ನಿಂತು ದೇವಾಧಿದೇವನೆ, ಹೀಗೆ ನನಗೆ ವರವನ್ನು ದಯಪಾಲಿಸುತ್ತಿದ್ದಾನೆಂದುಕೊಳ್ಳುವೆನು

( ಇಷ್ಟರಲ್ಲಿ ಒಬ್ಬ ಸೇವಕನು ಬರುವನು )

ಸೇವಕ – ಮಹಾರಾಜ, ತಮ್ಮ ಮಿತ್ರರಾಜರಾದ ಬಿಂಬಸಾರ ಮಹಾರಾಜರ ಕಡೆಯಿಂದ ಪತ್ರವನ್ನು ತೆಗೆದುಕೊಂಡು ವಾರ್ತಾಹಾರಿಯೊಬ್ಬನು ಬಂದಿದ್ದಾನೆ ಆತನು ತಂದ ಪತ್ರವು ಇಲ್ಲಿ ಇದೆ ಅವಲೋಕಿಸಬೇಕು

ಮಂತ್ರಿ – ಒಳ್ಳೆಯದು ಇಲ್ಲಿ ತಾ (ಮಂತ್ರಿಯು ಓದುತ್ತ ಹಿಗ್ಗಿ ಬೀರುವನು )

ಶುದ್ಧೋದನ – ಮಂತ್ರೀ, ಇಂಥ ದುಸ್ಸಮಯದಲ್ಲಿ ನಿಮ್ಮ ಮುಖವನ್ನರಳಿಸುವಂತಹದು ಅದರಲ್ಲಿ ಏನಿದೆ?

ಮಂತ್ರಿ – ಪ್ರಭೋ, ಸೂರ್ಯಗ್ರಹಣವು ಬಿಟ್ಟು ಹೋಯಿತು! ಓದುತ್ತೇನೆ ಕೇಳಿರಿ—

"ಮಹಾರಾಜಾಧಿರಾಜ ಶುದ್ಧೋದನ ಮಹಾರಾಜರವರ ಸನ್ನಿಧಿಯಲ್ಲಿ, ಪಾದಪದ್ಮೋಪಜೀವಿಯಾದ ಬಿಂಬಸಾರನ ಅನಂತ ವಂದನಗಳು ಇದೀಗ ಬಹಳ ದಿನಗಳಿಂದ ಕಳೆದು ಹೋಗಿದ್ದ ಸಿದ್ಧಾರ್ಥ ಕುಮಾರರು—

**ಶುದ್ಧೋದನ** .– ಆ! ಕುಮಾರರು!?

**ಯಶೋಧರೆ** – ದೈವವೇ! ನನ್ನನ್ನು ಕಾಪಾಡು! ಮುಂದಿನ ಪಂಕ್ತಿಯು ನಮಗೆ ಮಂಗಲ ಸಮಾಚಾರವನ್ನು ಹೇಳಲಿ!

**ಮಂತ್ರಿ** – "ಬಹಳ ದಿನಗಳಿಂದ ಕಳೆದು ಹೋಗಿದ್ದ ಕುಮಾರರು ಕಠೋರ ತಪಸ್ಸನ್ನಾಚರಿಸಿ ಪರಮ ಜ್ಞಾನವನ್ನು ಪಡೆದು ಮಹಾಬುದ್ಧ ಪದವನ್ನು ಹೊಂದಿ ಲೋಕೋದ್ಧಾರಕ್ಕಾಗಿ ಇಲ್ಲಿಗೆ ದಯಮಾಡಿಸಿ ಈ ಪಾಪಿಯನ್ನು ಉದ್ಧರಿಸಿದರು

**ಶುದ್ಧೋದನ+ಯಶೋಧರೆ** – ಬದುಕಿದೆವು! ಬದುಕಿದೆವು!

**ಮಂತ್ರಿ** – (ಓದುವನು) "ತಾವೆಲ್ಲರೂ ಮಹಾ ದುಃಖಾಂಬುಧಿಯಲ್ಲಿ ಮುಳುಗಿದ್ದೀರೆಂದು ಬಹು ದಿನಗಳಿಂದ ಕೇಳಿರುವ ನಾನು ಈ ಆನಂದ ವಾರ್ತೆಯನ್ನು ಬೇಕೆಂತಲೇ ಬೇಗನೇ ಸನ್ನಿಧಿಗೆ ಅರಿಕೆಪಡಿಸಿರುವೆನು ತಾವೆಲ್ಲರೂ ದುಃಖವನ್ನು ತ್ಯಜಿಸಿ ಸಂತೋಷಭಾಗಿಗಳಾಗಬೇಕೆಂದು ಪ್ರಾರ್ಥಿಸುವೆನು"

**ಸೇವಕ** – (ಬಂದು) ಮಹಾರಾಜರೆ, ಊರಮುಂದಿನ ಉಪವನದಲ್ಲಿ ಕೆಲವು ಸಾಧುಗಳೂ, ಭಿಕ್ಷುಗಳೂ ಬಂದಿದ್ದಾರೆ

**ಮಂತ್ರಿ** – ಬಂದರೇನಾಯಿತು? ಎಷ್ಟೋ ಜನರು ಬರುತ್ತಾರೆ

**ಸೇವಕ** – ದೊರೆಗಳೇ, ಅವರಲ್ಲಿ ಬುದ್ಧನೆಂಬ ಒಳ್ಳೇ ತೇಜಸ್ವಿಯಾದ ಸಾಧುವೊಬ್ಬನಿರುವನು

**ಯಶೋಧರೆ** – ಯಾವ ಸಾಧೂ? ಬುದ್ಧನೆನ್ನಲಿಲ್ಲವೇ?

**ಶುದ್ಧೋದನ** – ಮಂತ್ರೀ! ಇಲ್ಲಿಗೇ ಬಂದುಬಿಟ್ಟನು ನಮ್ಮ ಸೂರ್ಯನು ಏಳಿರಿ! ಉದ್ಯಾನಕ್ಕೆ ಹೋಗಿ ಭೆಟ್ಟಿಯಾಗೋಣ

**ಮಂತ್ರಿ** – ಕುಮಾರರು ತಾವಾಗಿಯೇ ಬಂದರಲ್ಲ! ನಮ್ಮ ಪುಣ್ಯಕ್ಕೆ ಎಣೆಯಿಲ್ಲ!!

**ಯಶೋಧರೆ** .– ನನ್ನ ಪ್ರಾಣಪದಕವನ್ನು ಯಾವಾಗ ಕಂಡೇನೆನ್ನುವಂತಾಗಿದೆ ಹೊರಡುವಾ, ಬೇಗನೇ ನಡೆಯಿರಿ

(ಹೋಗುವರು)

## ೧೪ ನೇ ಪ್ರವೇಶ

(ಉದ್ಯಾನದಲ್ಲಿ ಸಿದ್ಧಾರ್ಥನೂ ಶಿಷ್ಯನೂ)

ಸಿದ್ಧಾರ್ಥ – ಶಿಷ್ಯನೇ, ಇದೇ ಉದ್ಯಾನದಲ್ಲಿ ಮೊದಲು ವಿಹರಿಸಿ ದೆನು ಗಿಡಬಳ್ಳಿಗಳನ್ನೂ, ಮೊಗ್ಗೆ ಹೂಗಳನ್ನೂ ನೋಡುತ್ತ ನಲಿದಾಡಿದನು

ಶಿಷ್ಯ – ಇದೇ ಉದ್ಯಾನದಲ್ಲಿ ಇಂದು ಪ್ರಾಂತಸ್ಥರಾಗಿ ಇಳಕೊಂಡಿರಿ!

ಸಿದ್ಧಾರ್ಥ – ಇಂದಿನ ಸಂತೋಷವೇ ಮಿಗಿಲಾದದ್ದು

ಶಿಷ್ಯ – (ತೋರಿಸಿ) ಅಗೋ ನೋಡಿರಿ! ಯಾರಾರೋ ಇತ್ತ ಕಡೆಗೆ ಬರುತ್ತಿದ್ದಾರೆ

ಸಿದ್ಧಾರ್ಥ – (ನೋಡಿ) ಹೌದು, ಅವರೇ ನನ್ನ ತಂದೆಯಾಗಿದ್ದ ಶುದ್ಧೋದನ ಮಹಾರಾಜರು, ಹಿಂದೆಯು ಕಾಣುವವಳು ನನ್ನ ಅರ್ಧಾಂಗಿ ಯಾಗಿದ್ದ ಯಶೋಧರೆಯು! ಅವಳ ಕೈಹಿಡಿದುಕೊಂಡು ಬರುವವನೇ ನನ್ನ ಮಗನಾಗಿದ್ದ ರಾಹುಲನು! ಮತ್ತೊಬ್ಬರಿದ್ದಾರಲ್ಲ ಅವರು ಮಂತ್ರಿಗಳು

ಶಿಷ್ಯ – ಬಂದರು, ಸಮೀಪದಲ್ಲೇ ಬಂದರು

(ಶುದ್ಧೋದನ, ಮಂತ್ರಿ, ಯಶೋಧರೆ ಮೊದಲಾದವರು ಬರುವರು)

ಶುದ್ಧೋದನ – ಸಿದ್ಧಾರ್ಥನೆಲ್ಲಿ?

ಸಿದ್ಧಾರ್ಥ ,– (ಆತುರ, ತಮಗೆಲ್ಲ ಕಷ್ಟಕೊಟ್ಟವನು ಇಲ್ಲೇ ಇದ್ದೇನೆ

ಶುದ್ಧೋದನ – ಸಿದ್ಧಾರ್ಥ! ಮಹಾತ್ಮಾ! ಬಾ, ಈ ನಿನ್ನ ತಂದೆ ಯನ್ನು ದೂರಗೊಳಿಸಿ ಮಾತನಾಡದಿರಬೇಡ

ಸಿದ್ಧಾರ್ಥ – ನಾನು ಎಲ್ಲಿದ್ದರೂ ನಿಮ್ಮಿಂದ ದೂರಗತನಲ್ಲ

ಯಶೋಧರೆ – ಒಡೆಯರೇ, ಕೊನೆಗೆ ಮುಖವನ್ನು ತೋರಿಸಿ ಉದ್ಧ-ರಿಸಿದಿರಿ (ನಮಿಸುವಳು)

ಸಿದ್ಧಾರ್ಥ – ಮೊದಲಿನ ದುರ್ಮುಖವು ನಿಮ್ಮೆಲ್ಲರ ದೃಷ್ಟಿಪಥದಿಂದ ಮರೆಯಾಗಿ ಹೋಗಿರದಿದ್ದರೆ ಇಂದಿನ ಸುಮುಖವನ್ನು ನೀವಾರೂ ಕಾಣು-ತ್ತಿರಲಿಲ್ಲ!

ರಾಹುಲ – ತಂದೇ, ನಿನಗೆ ಎರಗುವೆ

ಸಿದ್ಧಾರ್ಥ – ಸಿಂಹಾಸನಾರೂಢನಾಗಿ ಬಹುಕಾಲ ಬಾಳು.

ಮಂತ್ರಿ – ಸಿದ್ಧಾರ್ಥ ಮಹಾರಾಜರಿಗೆ ತಮ್ಮ ಈ ಮುಪ್ಪಿನ ಮಂತ್ರಿಯು ಅಭಿವಂದಿಸುತ್ತಾನೆ (ನಮಿಸುವನು)

ಸಿದ್ಧಾರ್ಥ – (ಹಿಡಿದೆತ್ತಿ) ಇದೇನು? ಮಹಾರಾಜನೆಂದು ನನ್ನನ್ನು ಸಂಬೋಧಿಸುವಿರಲ್ಲ ರಾಹುಲನೇ ನಿಮ್ಮ ಭಾವೀ ಮಹಾರಾಜನು!

ಮಂತ್ರಿ – ಕುಮಾರರೇ, ನನ್ನ ಮುಂದೆಯೇ ಹುಟ್ಟಿಬೆಳೆದು ನಾನು ನೋಡುತ್ತಿರುವಾಗಲೇ ಜ್ಞಾನವನ್ನು ಪಡೆದು ಜನ್ಮಸಾರ್ಥಕಮಾಡಿ ಕೊಂಡಿರಲ್ಲ!

ಸಿದ್ಧಾರ್ಥ – ತಮ್ಮಂಥ ಹಿರಿಯರ ಆಶೀರ್ವಾದದಿಂದಲೇ ಲಭಿಸಿತಲ್ಲವೆ?

ಶುದ್ಧೋದನ – ಸಿದ್ಧಾರ್ಥಾ, ಇನ್ನಾದರೂ ಅರಮನೆಗೆ ನಡೆ, ಪಟ್ಟಕ್ಕೆ ಕುಳ್ಳಿರು ನಿನ್ನಂಥವರು ಪ್ರಜಾಹಿತವನ್ನು ಚೆನ್ನಾಗಿ ಸಾಧಿಸುವರಲ್ಲವೇ?

ಸಿದ್ಧಾರ್ಥ – ಮಹಾರಾಜರೇ, ಕ್ಷಮಿಸಬೇಕು ತಮ್ಮ ತರುವಾಯ ಆ ಪಟ್ಟವು ರಾಹುಲನದು! ಸಂನ್ಯಾಸವೇ ನನ್ನ ಸಾಮ್ರಾಜ್ಯವು!

ಶುದ್ಧೋದನ+ಮಂತ್ರಿ – ನಿನ್ನಂಥ ಚಿಕ್ಕವನಿಗೆ ಅದು ಪ್ರಿಯವಾದರೆ ನಮ್ಮಂಥ ವೃದ್ಧರಿಗೆ ಇಲ್ಲಿ ಇಸ್ನಿರುವದೇನು? ನಮಗೂ ಅದೇ ಸೌಭಾಗ್ಯಬೇಕು

ಯಶೋಧರೆ – ಪ್ರಾಣೇಶಾ, ಈ ನಿಮ್ಮ ದಾಸಿಯನ್ನು ಕೈ ಬಿಡ ಬೇಡಿರಿ ನಾನು ಹೆಂಗುಸಾದರೂ ದೀಕ್ಷೆ ಹೊಂದಲಿಕ್ಕೆ ಆಶಿಸುತ್ತೇನೆ ನನ್ನನ್ನು ಉದ್ಧರಿಸಿ ಶಿಷ್ಯಳನ್ನಾಗಿ ಆರಿಸಿಕೊಳ್ಳಬೇಕು (ಎರಗುವಳು)

ಸಿದ್ಧಾರ್ಥ – ಆಗಲಿ ರಾಹುಲನಿಗೆ ಪಟ್ಟ, ನಿಮ್ಮೆಲ್ಲರಿಗೆ ಸಂನ್ಯಾಸ ನಿಮ್ಮೆಲ್ಲರನ್ನು ಮುಕ್ತರನ್ನಾಗಿ ಮಾಡುವದು ನನ್ನ ಕರ್ತವ್ಯವೇ! ನನಗೆ ದೊರೆತ ಸುಖಸಾಮ್ರಾಜ್ಯದಲ್ಲಿ ನಿಮಗೆ ಪಾಲು ಸಿಗದೆ ಹೇಗೆ ಉಳಿದೀತು?

ಯಶೋಧರೆ – ನಾಥಾ, ಸಂನ್ಯಾಸಿಯಾದರೂ ಈ ಅಬಲೆಯನ್ನು ಮರೆಯದೆ ಉದ್ಧರಿಸಿದಿರಿ ನನ್ನ ತಪಸ್ಸು ಸಾರ್ಥಕವಾಯ್ತು!

ಶುದ್ಧೋದನ – ಸಿದ್ಧಾರ್ಥಾ, ನೀನು ದೇವಾಂಶನು! ಮನುಷ್ಯ ರೂಪದಿಂದ ಭೂಮಿಗಿಳಿದ ದೇವತೆಗಳಲ್ಲೊಬ್ಬನು! ಈ ಮೃತ್ಯುಲೋಕ-ದಲ್ಲಿ ಬುದ್ಧನಾದೆ! ನೀನೇ ಬುದ್ಧ! ನಿನ್ನ ಜ್ಞಾನಜ್ಯೋತಿಯು ಸೂರ್ಯ-ಚಂದ್ರರಂತೆ ಯಾವಾಗಲೂ ಬೆಳಕು ಕೊಡಲಿ "ಜಯ ಬುದ್ಧ ಭಗವಾನ್!!!"

ಎಲ್ಲರೂ – "ಜಯ ಬುದ್ಧ ಭಗವಾನ್!"

# ಬಂದೆಪ್ಪಾ ಮಳೆರಾಜ !

( ಬಾನುಲಿ ರೂಪಕ )



## ೧ನೇ ದೃಶ್ಯ

( ತೆರೆಯಲ್ಲಿ )

ಬಣ್ಣದ ಗುಬ್ಬ್ಯಾರು ಮಳೆರಾಜ । ಅವರು ।
ಮಣ್ಣಾಗಿ ಹೋದರು ಮಳೆರಾಜ ॥
ಬಣ್ಣದ ಗುಬ್ಬ್ಯಾರು ಮಣ್ಣಾಗಿ ಹೋದರು
ಅನ್ನದ ದಿನ ಬಂದು ಮಳೆರಾಜ ॥೧॥

ಒಕ್ಕಲಗೇರ್‍ಯಾಗ ಮಳೆರಾಜ । ಅವರು ।
ಮಕ್ಕಳ ಮಾರ್‍ಯಾರ ಮಳೆರಾಜ ॥
ಮಕ್ಕಳ ಮಾರೀ ರೊಕ್ಕಾ ಹಿಡಕೊಂಡು
ಭತ್ತಂತ ತಿರುಗ್ಯಾರ ಮಳೆರಾಜ ॥೨॥

ಸೊಲಗಿ ಹಿಟ್ಟಿನಾಗ ಮಳೆರಾಜ । ಅವರು ।
ಸುಣ್ಣನ್ನೇ ಕೂಡಿಸ್ಯಾರ ಮಳೆರಾಜ ॥
ಹಸಿದು ಬಂದು ಕೇರಿ ಗಪಗಪ ತಿಂದು
ಒದ್ದಾಡಿ ಸತ್ತಾರ ಮಳೆರಾಜ ॥೩॥

ಗಿದ್ದನ ಅಕ್ಕ್ಯಾಗ ಮಳೆರಾಜ । ಅವರು ।
ಅಪ್ಪುವನ್ನೆ ಕೂಡಿಸ್ಯಾರ ಮಳೆರಾಜ ।
ಸಣ್ಣನ್ನ ಕೂಸೀಗಿ ಮಣ್ಣಿಸಿ ಉಣಿಸ್ಯಾರ
ಕಣ್ಣನ್ನೇ ಮುಚ್ಚ್ಯಾವ ಮಳೆರಾಜ ॥೪॥

ಗಂಡುಳ್ಳ ಬಾಲೇರು ಮಳೆರಾಜ । ಅವರು ।
ಭಿಕ್ಷಾಕ ಹೊಂಟಾರ ಮಳೆರಾಜ ॥
ಗಂಡುಳ್ಳ ಬಾಲೇರು ಭಿಕ್ಷಕ ಹೋದರು
ಅನ್ನದ ದಿನ ಬಂದು ಮಳೆರಾಜ ॥೫॥

ಸ್ವಾತಿಯ ಮಳಿ ಬಂದು ಮಳೆರಾಜ | ಸುತ್ತ |
ದೇಶಕ ಆಗ್ಯಾದ ಮಳೆರಾಜ ||
ಹಳ್ಳಕೊಳ್ಳ ಹೆಣ ಹರಿದಾಡಿ ಹೋದವು
ಯಾವಾಗ ಬಂದೆಪ್ಪ ಮಳೆರಾಜ ||೬||

(ಹಳ್ಳಿಯ ಚಾವಡಿಯ ಮುಂದಿನ ಬೇವಿನ ಕಟ್ಟೆಯ ಮೇಲೆ ಊರ ಪ್ರಮುಖ ರೈತರು ಸೇರಿದ್ದಾರೆ ಮಳೆಯೆಳಸಿದ್ದರಿಂದ ಅವರು ಚಿಂತಾಮಗ್ನರಾಗಿದ್ದಾರೆ ಅವೇ ವಿಚಾರಗಳನ್ನು ಆಡುತ್ತಲೂ ಉಪಾಯಗಳನ್ನು ಯೋಚಿಸುತ್ತಲೂ ಕುಳಿತಿದ್ದಾರೆ)

ನರಸಪ್ಪ .– ಸಿದ್ದಣ್ಣಕಾಕಾ, ಇಂದು ಆದಿತ್ಯವಾರ ನಾಳೆ ಒಂದು ದಿನ ಮಳೆಯಾಗದೆ ದಾಟಿದರ ಕಲ್ಲೂರ ನುಡಿಯೂ ಸುಳ್ಳುಬಿದ್ದಂತೆಯೇ ಸೈಯಪಾ!

ಸಿದ್ದಣ್ಣ – ಹಾಂಗ ಈಗಲೇ ದುಡುಕಬಾರದು ದೇವರ ಹೇಳಿಕೆಯ ಮೇಲೆ ಅವಿಶ್ವಾಸ ತೋರಿಸುವುದರಿಂದಲೇ ಮಳಿ ವರುಷ ವರುಷ ಮುಂದ ಕ್ಕೆಳಸುತ್ತ ಇದೆ.

ನರಸಪ್ಪ – ಮಳೆಯ ಹಾಡಿನಲ್ಲಿ ಹೇಳಿದಂತೆ ಹಿಂದಿನ ಹಳ್ಳಿಯಲ್ಲಿ ಒಕ್ಕಲಿಗರು ದನದ ಕುಣಿಕಿ ತೆಗೆದುಬಿಟ್ಟು ಗುಳೇಹೋದರಂತೆ–ಹೈದರಾ ಬಾದದ ಕಡೆಗೆ ಮತ್ತೊಂದು ಯಾವುದೋ ಊರಾಗ ಮಕ್ಕಳನ್ನ ಬಿಟ್ಟುಕೊಟ್ಟೇ ತಾಯಿತಂದೆ ಪರಾರಿಯಾಗಿದ್ದಾರಂತೆ!

ಸಿದ್ದಣ್ಣ – ಇಗಾ, ನರಸಪ್ಪಾ! ನಾನೊಂದು ಮಾತು ಹೇಳುತ್ತೇನೆ ಈಗ ಗಣೇಶಚವತಿ ಆಯ್ತೇ? ನಾಳಿನ ಹುಣ್ಣಿವೀತನಕ ಮಳೀ ಆಶಾನೇ ಇಲ್ಲ.

ನರಸಪ್ಪ – ಆವಾಗಾದರೂ ಏನು ಭರವಸೆ?

ಸಿದ್ದಣ್ಣ – ಆ ಭರವಸೆ ನಾನೇಕೆ ಹೇಳಲಿ? ಕಿವಿಗೊಟ್ಟು ಕೇಳು ಕೆಳಗಿನ ಮನೆಯಿಂದ ಹಾಡು ಕೇಳಿ ಬರುತ್ತದೆ ಕೇಳು–ಕೇಳು!

(ತೆರೆಯಲ್ಲಿ)

ಅಡ್ಡಡ್ಡ ಮಳಿ ಬಂದು ದೊಡ್ಡ ದೊಡ್ಡ ತೆನಿಯಾಗಿ |
ಗೊಡ್ಡಗೋಳೆಲ್ಲಾ ಹಯನಾಗಿ | ಜೋಕುಮಾರಾ ||
ಅಟಮೀ ದಿನಾ ಹುಟಿದಾನ ನನ ಕೊಮರಾ | ಜೋಕುಮಾರಾ ||

ನರಸಪ್ಪ – ಇವೆಲ್ಲಾ ಪ್ರತಿವರುಷವೂ ಹಾಡುವ ಹಾಡುಗಳೇ ಇವುಗಳಿಂದ ಏನೂ ಫಲ ಇಲ್ಲ ಮಳೆ ಬರುವುದಕ್ಕೆ ಮತ್ತೇನಾದರೂ ಉಪಾಯವಿದ್ದರೆ ಹೇಳಿರಲ್ಲಾ!

ಸಿದ್ದಣ್ಣ – ಮಲ್ಲಯ್ಯನ ಗುಡಿಯಲ್ಲಿ ಸಪ್ತಾಹ ಹಚ್ಚುವುದು, ಕಿಳ್ಳೀ ಕೇತರ ಆಟ ಮಾಡಿಸುವುದು

ನರಸಪ್ಪ – ಹಾಂ! ಹಾಂ! ಸಿದ್ದಣ್ಣಕಾಕಾ, ನೆನಪಾಯಿತು ಕಿಳ್ಳೀಕೇತರ ಆಟದವರು ಇಲ್ಲೆ ಹೊರಗೆ ದ್ಯಾಮವ್ವನ ಗುಡಿ ಹತ್ತರ ಇಳಕೊಂಡಿದ್ದಾರೆ ಯಾವುದೋ ಮುಂದಿನ ಹಳ್ಳಿಗೆ ಹೊರಟಿದ್ದಾರೆ ಅವರನ್ನೇ ನಿಲ್ಲಿಸಿಕೊಂಡು ಬಿಡುವಾ

ಸಿದ್ದಣ್ಣ – ಹೋಗಿರಿ ಹಾಗಾದರೆ ನರಸಪ್ಪಾ, ತಿಪ್ಪಣ್ಣಾ ನೀನೂ ಹೋಗು, ಅವನ ಜೊತೆಗೆ ಒಮ್ಮನ ಜೋಳ ಹೆಚ್ಚಿಗೆ ಹೋದರೂ ಚಿಂತೆ ಯಿಲ್ಲ ಈ ಹೊತ್ತು ಅವರು ನಿಂತುಬಿಟ್ಟು ಆಟವಾಡಲಿ ಮಳೆಯೆಳಸಿ ದಾಗ ಅವರು ಆಟವಾಡಿದರೆ ಮಳೆ ಬರುವದೆಂದು ಹಿರಿಯರು ಹೇಳುತ್ತ ಬಂದಿದ್ದಾರೆ

ನರಸಪ್ಪ – ಹಾಂಗಾದರೆ ತಿಪ್ಪಣ್ಣಾ ಏಳು, ಆಟದವರನ್ನು ಕಂಡು ಗಟ್ಟಿಮಾಡಿಕೊಂಡು ಬರೋಣ ನಡೆ

(ಹೋಗುವರು)

## ೨ನೇ ದೃಶ್ಯ

(ಕಿಳ್ಳಿಕೇತರ ಆಟದ ಸಿದ್ಧತೆ ನಡೆದಿದೆ ಚಾವಡಿಯ ಮುಂದಿನ ಬಯಲಲ್ಲಿ ಮಂದ ವಾಗಿ ಬಿದ್ದ ಬೆಳದಿಂಗಳಲ್ಲಿ ಊರ ಹುಡುಗರೆಲ್ಲ ನೆರೆದು ತಂತಮ್ಮ ಲಲ್ಲೆನುಡಿಗಳಿಂದ ಹಲವು ತರದ ಆಟವಾಡುತ್ತಿದ್ದಾರೆ)

ಮುಂದಿನವ .– ನನ್ನ ಹೆಗಲ ಮೇಲೆ ಎರಡೂ ಕೈಗಳ ಬೆರಳೂರಿ ನಿಲ್ಲು

ಹಿಂದಿನವ .– ನಿಂತೆ ಆಮೇಲೆ?

ಮುಂದಿನವ – ನಾನು ಹೇಳಿಕೊಟ್ಟಂತೆ ಹಿಮ್ಮೇಳದವನಾಗು ಕೂಂ–ಗುಬ್ಬೀಗೂಡೆಲ್ಲ್ಯಾದ?

ಹಿಂದಿನವ .– ತೆಗ್ಗು ತೆವರು ಎಲ್ಲ್ಯಾದ?

ಮುಂದಿನವ – ಗುಬ್ಬೀ ಗೂಡು ಎಲ್ಲ್ಯಾದ?

ಹಿಂದಿನವ – ತಗ್ಗುತೆವರು ಎಲ್ಲಾ್ಯದ?

(ಮೊದಲು ಸಾವಕಾಶವಾಗಿಯೂ ಬಳಿಕ ಜತ್ತರವಾಗಿಯೂ ನಡೆಯುತ್ತ ಆ ಬಳಿಕ ಓಡುತ್ತ ಅದೇ ಕಾಲತಾಳದಲ್ಲಿ ಅದನ್ನು ಕೂಗುತ್ತ ಕೆಲಹೊತ್ತು ಸಾಗಿ, "ಚಕ್ ಪಕ್ ಚಕ್ ಪಕ್ ಚಕ್ ಪಕ್" ಎನ್ನುತ್ತ ಓಡಾಡುವರು)

ಒಬ್ಬ – ಮಳಿ ಬಾರೋ ಮಾರಯಾ।

ಎಲ್ಲರೂ – ಗುಡಿ ಕಟ್ಟ್ಯೋ ಸಂಗಯ್ಯಾ॥

ಒಬ್ಬ – ಮಳಿ ಬಾರೋ ಮಾರಯಾ।

ಎಲ್ಲರೂ – ಗುಡಿ ಕಟ್ಟ್ಯೋ ಸಂಗಯ್ಯಾ॥

(ಒಬ್ಬನು ಮುಮ್ಮೇಳದವನಂತೆ, ಉಳಿದವರು ಹಿಮ್ಮೇಳದವರಂತೆ ಸಾಲೆಯೊಳಗಿನ ಪರೋಚಿ ಪದ್ಧತಿಯಿಂದ ಸಾಗುವದು)

ನರಸಪ್ಪ – ಎಲೋ ಚಿಕ್ಕೋಳ್ರ್ಯಾ, ಇನ್ನು ಮೇಲೆ ಆಟ ಸುರು ಆಗತಾದ, ಗಪ್ಪಾಗಿ ಕುಳ್ತು ಕೇಳ್ರಿ

(ಹುಡುಗರು ಹಾಗೇ ಒದರಾಡುವರು. ನರಸಪ್ಪ ಅವರನ್ನು ಒತ್ತಟ್ಟಿಗೆ ಕರೆಯುವನು)

ಹುಡುಗರು – ನಾವು ಕೂಡೋದಿಲ್ಲ ಆಡುವರೇ! ಆಡೂ ಮಕ್ಕಳಿಗೆ ಅಡವೀ ಕೂಡಿಸುತ್ತೀಯಾ?

ನರಸಪ್ಪ – ಹಾಗೆ ಮಾಡಿದರೆ ಏಟು ಹಾಕುತ್ತೇನೆ! ನೋಡಿರಿ!

ಒಬ್ಬ – ನರಸಪ್ಪ ಮಾಮಾ! ಮಾಸ್ತರ ಆಗೀದಿಯೇನು ಏಟು ಹಾಕಲಿಕ್ಕೆ? ಅಹುದೇ—ಮಾಮಾ! ಮಾತಾಡು! ಮಾಮಾ! ಮಾಮಾ! ಮಾತಾಡು! ಮಾತಾಡು!

ಎಲ್ಲರೂ – ಮಾಮಾ! ಮಾಮಾ! ಮಾತಾಡು! ಮಾತಾಡು!

ಒಬ್ಬ – ಮಾವಿನ ಗಿಡಕ ಜೋತಾಡು! ಜೋತಾಡು!

ಎಲ್ಲರೂ – ಮಾವಿನ ಗಿಡಕ ಜೋತಾಡು! ಜೋತಾಡು!

ಒಬ್ಬ – ಮಾವಿನ ಟೊಂಗಿ ಮುರೀತು!

ಎಲ್ಲರೂ – ಮಾವನ ಅಂಗಿ ಹರೀತು!

ಒಬ್ಬ – ಮಾವಿನ ಟೊಂಗಿ ಮುರೀತು!

ಎಲ್ಲರೂ – ಮಾವನ ಅಂಗಿ ಹರೀತು!!

(ಹಾಡುತ್ತ ಕುಣಿಯುವರು ಅಷ್ಟರಲ್ಲಿ ಕಿಳ್ಳಿಕೇತರ ಆಟ ಆರಂಭವಾಗುವ ಲಕ್ಷಣ ಕಂಡು ಎಲ್ಲರೂ ತಮ್ಮ ತಮ್ಮ ಸ್ಥಳದಲ್ಲಿ ಅಥವಾ ಸಿಕ್ಕಲ್ಲಿ ಕುಳಿತುಕೊಳ್ಳುವರು)

ಕಿಳ್ಳಿಕೇತರು – ಗರಡಿ, ಸಾಧಕ, ಮಣ್ಣ ಮಸೂಟಗಿ ಮಾಡಿಕೊಂಡು ಭೀಮಸೇನ ಅಣ್ಣನ ಪಾದಕ ಹ್ಯಾಂಗ ಬೀಳ್ತಾನೆಂದರೆ— (ರಾಗದಲ್ಲಿ) ಏ! ಅಣ್ಣಾ! ನೀ ನನಗೊಂದು ಗುದ್ದೋ!! (ಎಂದು ತಾನವೆತ್ತಲು ಹಿಮ್ಮೇಳದಲ್ಲಿ ಮದ್ದಳೆಯ ಸಪ್ಪಳವಾಗುತ್ತದೆ )

ಅಣ್ಣನ ಪಾದಕ್ಕ ಬಿದ್ದೆದ್ದು ಭೀಮಸೇನ ಕೇಳುತ್ತಾನೆ—ಯಾಕಣ್ಣಾ! ಯಾಕಣ್ಣಾ! ಯಾಕ ಕರದಿದ್ದೀ? ಯಾಕ ಕರೆದಿದ್ದಿ?

(ಧರ್ಮರಾಜನ ಆಳಿಕೆಯ ದೃಶ್ಯದಲ್ಲಿ ಮೋಡಗಳು ಬಂದು ಬಂದು ಗುಡುಗು ಕೇಳಿಸುವದು ಮಿಂಚು ಕಾಣಿಸುವದು )

ಹುಡುಗರು – ಅಗಾ! ಮೋಡ ಬಂತು! ಮೋಡ ಬಂತು!! ಧರ್ಮರಾಜನ ಕಾಲ!

ಇನ್ನೊಬ್ಬ – ಗುಡುಗು ಕೇಳಿಸುವದಿಲ್ಲವೇ?

ಬೇರೊಬ್ಬ – ಮಿಂಚು! ಮಿಂಚು!! ನಾಳೆ ನಿಶ್ಚಯವಾಗಿ ಮಳೆ ಬಂದೇ ಬಿಡುವದು!

ಕಿಳ್ಳಿಕೇತರು –

ಭಲೆ! ತಮಾಸಿನೋಡು!
ಬಯಲಾಗ ಕುಣಿತಾನ!
ಭಲೆ! ತಮಾಸಿ ನೋಡು!
ಬಯಲಾಗ ಕುಣಿತಾನ!!

ಹುಡುಗರು – ಇವನಾರೋ ಅಜ್ಜಾ?

ಒಬ್ಬ – ಕುಸ್ತೀ ಕಲಿಯುವ ಜಟ್ಟಿ ಗರಡೀ ಸಾಧಕ ಮಾಡಲಿಕ್ಕೆ ಕುಣಿಯುತ್ತ ಹೊರಟಿದ್ದಾನೆ

ಇನ್ನೊಬ್ಬ – ಎಲ್ಲಿಗೆ ಹೊರಟಿದ್ದಾನೆ?

ಒಬ್ಬ – ಗರಡೀ ಮನೆಗೆಂದು ತೋರುತ್ತದೆ

ಹುಡುಗರು :– ಅಗಾ! ಅಗಾ! ಜೋಳದ ಬೆಳೆ, ಬಿಗಿದು ನಿಂತಿದೆ! ತೆಂಗಿನಷ್ಟು ತೆನೆಗಳು!

ಒಬ್ಬ – ಹಕ್ಕಿಗಳು ಹಿಂಡುಗಟ್ಟಿ ಬಂದು ಬೆಳೆ ತಿನ್ನತೊಡಗಿವೆ.

ಇನ್ನೊಬ್ಬ – ಹಕ್ಕಿಗಳಲ್ಲಿ ಒಂದು ಕಾಗೆ ಬಂತು!

ಒಬ್ಬ – ಅಹುದು! ಅಹುದು!! ಅದು ತೆನೆಯ ಮೇಲೆ ಕುಳಿತುಕೊಳ್ಳದೆ ಹಕ್ಕಿ ಕಾಯುವ ಆಳಿನ ಕಡೆಗೆ ಧಾವಿಸಿತಲ್ಲ!

ಬೇರೊಬ್ಬ – ಅವನ ಕಣ್ಣು ಕುಕ್ಕುತ್ತದೇನು ಮತ್ತೆ ?

ಇನ್ನೊಬ್ಬ – ಕುಕ್ಕದೇನು ಮಾಡೀತು ? ಅವನಕಣ್ಣಲ್ಲಿ ಪಿಚ್ಚಿನ ಮುದ್ದೆ !

ಒಬ್ಬ – ಓ ! ನರಸಪ್ಪಮಾವಾ ! ಇದೇನು ಚಿತ್ರವೋ ?

ನರಸಪ್ಪ – ಮಳೆಬೆಳೆಗಳು ಹೆಚ್ಚಾದರೆ ಪಿಚ್ಚು ಸಹ ಬಹಳವಲ್ಲವೇ ?

(ಎಲ್ಲರೂ ನಗುವರು)

## ೩ನೇ ದೃಶ್ಯ

ಸಿದ್ದಣ್ಣ – ಇಕಾ ನರಸಪ್ಪಾ, ಜೋಕುಮಾರನ ಹುಣ್ಣಿವೆ ಆಯ್ತು ಅಲ್ಲಿ ನೋಡು ದೂರದಲ್ಲಿ ಮುಗಿಲಿನ ಲಕ್ಷಣವೇ ಇಂದು ಬೇರೆಯಾಗಿದೆ

ನರಸಪ್ಪ – ನಾವೆಲ್ಲ ಸಪ್ತಾಹ, ಕಿಳ್ಳಿಕೇತರ ಆಟ ಇಂಥ ಕಾರಭಾರ ಮಾಡುತ್ತ ತಿರುಗಾಡಿದೆವು ! ಆ ಬನ್ನೀಗಿಡದ ಹೊಲ ಇನ್ನೂ ಹರಗಿಲ್ಲ !

ಸಿದ್ದಣ್ಣ – ಹೊಲ ಹರಗದೆ ಮಳೆಯ ದಾರಿ ನೋಡಿದೆಯಾ ?

ನರಸಪ್ಪ – ಅದಕ್ಕೆಷ್ಟೊತ್ತು ಬೇಕು? ಎರಡು ದಿನಗಳಲ್ಲಿ ಮುಗಿಸಿ ಬಿಡುವೆನು

ಸಿದ್ದಣ್ಣ – ಅಲ್ಲಿಯ ವರೆಗೆ ಮಳೆ ತಡೆಯಬೇಕು ಅಹುದಲ್ಲವೇ ?

ನರಸಪ್ಪ – ಛೇ ! ಛೇ ! ಮಳೆ ಬಂದುಬಿಡಲಿ ಹರಗದೆ ಈ ಸಾರೆ ಬಿತ್ತುವೆನು

( ಹುಡುಗರ ಹಿಂಡು ಚಾವಡಿ ಮುಂದಿನ ಬಯಲಿಗೆ ಬರುವದು ಅಷ್ಟರಲ್ಲಿ ಮೋಡವೇರಿ ಮಳೆ ಬರತೊಡಗ ವದು )

ಒಬ್ಬ – ಭಲೇ ತಮಾಸಿ ನೋಡು !
ಬಯಲಾಗ ಕುಣಿತಾನ !

ಎಲ್ಲರೂ – ಭಲೆ ತಮಾಸಿ ನೋಡು !
ಬಯಲಾಗ ಕುಣಿತಾನ !

ಒಬ್ಬ – ಭಲೆ ತಮಾಸಿ ನೋಡು !
ಬಯಲಾಗ ಕುಣಿತಾನ ॥

ಎಲ್ಲರೂ – ಭಲೆ ತಮಾಸಿ ನೋಡು !
ಬಯಲಾಗ ಕುಣಿತಾನ ॥ ( ಕುಣಿದಾಡುವರು )

ಸಿದ್ದಣ್ಣ ಎಲೋ ನರಸಪ್ಪಾ! ಮಾಳಗೀ ಏರಿರೋ, ಮಳೆ ಬಂತು ಬೆಳಕಿಂಡಿ ಮುಚ್ಚಿಕೊಳ್ಳಿರೋ

ನರಸಪ್ಪ – ಇನ್ನಾ ದೂರೈತೇಳು ಕಾಕಾ!

ಹುಡುಗರು – (ಹಿಮ್ಮೇಳ ಮುಮ್ಮೇಳವಾಗಿ)

ಕಳ್ಳ್ಯಾ ಮಿಳ್ಳ್ಯಾ! ಚಿಪಾಟಿ ಮಿಳ್ಳ್ಯಾ!
ಬಸರೀ ಗಿಡದಾಗ ಬಸಪ್ಪ ಕೂತಾನ!
ಮಳಿ ಹೊಡೀಲೋ ಮಳಿ ಹೊಡಿಲೋ ‖

ಎಲೋ! ಎರಡೂ ಕೈಗಳನ್ನು ಚಾಚಿರೋ ಎರಡೂ ಕೈ ಚಾಚಿ ಮೈ ಸುತ್ತು ತಿರುಗುತ್ತ ಈ ಹಾಡು ಹೇಳಬೇಕು (ಮತ್ತೊಮ್ಮೆ ಹಾಡುವರು)

ನರಸಪ್ಪ – ಸಿದ್ದಣ್ಣ ಕಾಕಾ, ಕೇಳಿಸಿತಿಲ್ಲೊ ಗುಡುಗು! ಕಿಳ್ಳಿಕೇತರ ಆಟದ ಫಲ ಕೇಳಿದಿಯಿಲ್ಲೋ?

ಸಿದ್ದಣ್ಣ – ಪುಷ್ಯದ ಮಳೆ ಬಂದು ಮಳೆರಾಜ! ಸುತ್ತ
ದೇಶಕ ಆಗೇದ ಮಳೆರಾಜ ‖
ಹಳ್ಳಕೊಳ್ಳ ಸೂಸ್ಯಾಡಿ ಹರಿದಾವು
ಯಾವಾಗ ಬಂದೆಪ್ಪ ಮಳೆರಾಜ!

ಹೀಗಾಗಬಾರದೇ?

ಹುಡುಗರೆಲ್ಲ – ಅಗಾ! ಅಗಾ!! ಧಡಡಡಡ ಗುಡುಗು!

ಗುಡು ಗುಡು ಮುತ್ಯಾ ಬಂದ!
ಸಜ್ಜೀ ರೊಟ್ಟಿ ತಂದ!
ಮಾಡದಾಗ ಇಟ್ಟಾ!
ಬೇಡಿದಾಗ ಕೊಟ್ಟಾ

(ಇದನ್ನು ಹಲವುಸಾರೆ ಹಾಡಿಕೊಂಡು ಆಡುತ್ತಿರಲಾಗಿ ಮಳೆಯು ಬಲವಾಗಿ ಸುರಿಯಲು ತೊಡಗಿತು)

ನರಸಪ್ಪ – ದೇವರು ಕಣ್ಣು ತೆಗೀಲಿಕ್ಕೆ ಕೂತರೆ ತಡ ಹಿಡೀತದೇ? ಏಳು ಕಾಕಾ! ಆಸರಕ್ಕೆ ನಡೆ!

ಸಿದ್ದಣ್ಣ – ಬಂದೆಪ್ಪಾ ಮಳೆರಾಜ!

(ಎದ್ದು ಹೋಗುವರು "ರಪ ರಪ"ವೆನ್ನುವ ಮಳೆಯು ಸಪ್ಪಳವೂ ನಡು ನಡುವೆ ಗದ್ದರಿಕೆಯೂ ಕೇಳಿಸುವವು)



# ಸಾಲ್ಯಾಗಿನ ವಿದ್ಯಾ



(ತಿಪ್ಪಣ್ಣ, ಗುಂಡ, ಧರಿಂಯಪ್ಪ ಇವರಲ್ಲಿ ನಡೆಯುಬಹುದಾದ ಶೈಕ್ಷಣಿಕ ಸಂಭಾಷಣೆ)

**ತಿಪ್ಪಣ್ಣ** – ನಮಸ್ಕಾರವಾ ಗುಂಡ, ಎಲ್ಲಿಗೆ ಹೊರಟಿ?

**ಗುಂಡ** – ನಮಸ್ಕಾರ! ನಮಸ್ಕಾರ!! ಏನಪಾ ತಿಪ್ಪಣ್ಣಾ, ನಮ್ಮ ಸಾಲ್ಯಾಗೇನೊ ರೇಡಿಯೋ ಹಚ್ಚತಾರಂತ, ಕೇಳಲಿಕ್ಕೆ ಹೋಗೋಣ ಬರ್ತೀಯೇನು? ಹೋಗೂನು, ಅನಕಾ ಕೂತುಕೋ

**ತಿಪ್ಪಣ್ಣ** – ಸಾಲ್ಯಾಗ ರೇಡಿಯೋ ಬಂದಾದೇನು? ಈಗೇನಪ್ಪಾ, ಸಾಲೆಂದರ ಸಾಲಬಿಟ್ಟೀ ಕುಣೀಲಿಕ್ಕೆ ಹತ್ತಿದೆ ಇಂದು ರೇಡಿಯೋ ಬಂತು ನಾಳೆ ಸಿನೇಮಾ ಬರುವದು ನಾಡದು ಮತ್ತೊಂದು

**ಗುಂಡ** – ಕಲಿಸೂದೇ ಕಡಿಮೆ ಆದಮೇಲೆ ಕಿಚಡಿ ಕಲಿಸೋದೇ ಸಾಲ್ಯಾಗಿನ ಕೆಲಸ ಆಗಿಬಿಟ್ಟಾದ

**ತಿಪ್ಪಣ್ಣ** – ನಾವು ಹತ್ತೊರ್ಷ ಕಲಿತೆವು ನಮಗೇನು ಇದ್ಯಾ ಬರಲಿಲ್ಲ, ನಮ್ಮ ತಿಪ್ಪೆಯೇನೂ ಸ್ವಚ್ಛವಾಗಲಿಲ್ಲ ಸಾಲೀಗಿ ಹೋಗುವಾಗಲೂ ತಿಪ್ಪಣ್ಣ, ಬಿಡುವಾಗಲೂ ತಿಪ್ಪಣ್ಣ! ಆ ಸಾಲೀ ನೆನವು ತಗೀಬ್ಯಾಡ

**ಗುಂಡ** – ಹಾಂಗ ಜಬರದಸ್ತಿ ಕಲಿಸುವಾಗಲೇ ನಾವು ಗುಂಡ ಆಗಲಿಲ್ಲ ಈಗಿನ್ಹಾಂಗ ಆದರೆ ನಮಗೇನೇನೂ ಬರುತ್ತಿದ್ದಿಲ್ಲ!

**ತಿಪ್ಪಣ್ಣ** – ಆದ್ಯಾಕ ಗುಂಡಾ, ನಾವು ಕಲಿತಷ್ಟು ಅಂಕಿ ಮಗ್ಗಿ, ನಾವು ಕೂಗಿ ಹೇಳಿದಷ್ಟು ಪರೋಟಿ, ಮತ್ತ–ಮತ್ತ

**ಗುಂಡ** – ನಾವು ಗೀಚಿದಷ್ಟು ಕರಡು–ಪುಸ್ತಿ ಹಹ್ಹೆಹ್ಹ!

**ತಿಪ್ಪಣ್ಣ** – ಹೌದು! ಹೌದು!! ನಾವು ಗೀಚಿದಷ್ಟು ಕರಡು–ಪುಸ್ತಿ ಈಗಿನವರೇನು ಗೀಚುತ್ತಾರೆ? ಹಾಗೆ ಮಾಡಿದ್ದರೆ, ಇವರೆಲ್ಲ ಪಾಸಾಗೂದು ತಿಳೀತಿತ್ತು

**ಗುಂಡ.**– ನನ್ನಂಥವ ನನಗ, ಅ-ಆದಿಂದ ಹೆಳಕ್ಷಜ್ಞ ವರೆಗೆ ಕಲೀ ಬೇಕಾದರೆ ಮೂರು ವರ್ಷ ಹಿಡಿದವು ಅಕ್ಷರ ಒಂದೇ ಎರಡೇ? ಐವತ್ತೆರಡು! ಮ್ಯಾಲೆ ಕಕ್ಕಾ ಕಿಕ್ಕೀ

**ತಿಪ್ಪಣ್ಣ** – ಅದಕ್ಕೇ

ಕಕ್ಕಾನ ಕಾಗಿ ಒಯ್ತೋ! ಗಗ್ಗಾನ ಗೂಗಿ ಒಯ್ತೋ
ನನ್ನಾನ ನಾಯಿ ಒಯ್ತೋ ಮಾಸ್ತರಾ!

ಎಂದು ಹೇಳಬೇಕಾಗುತ್ತಿತ್ತು

**ಗುಂಡ** – ಈಗ ಸಾಲ್ಯಾಗ ಸಣ್ಣ ಬಿನ್ನಯತ್ತೆ ಇಲ್ಲ, ದೊಡ್ಡ ಬಿನ್ನಯತ್ತೆ ಇಲ್ಲ, ಒಮ್ಮೆಲೆ ಮೊದಲನೆ ಯತ್ತೇನೇ ಸುರು! ಹ್ಯಾಂಗ ಕಲಿಸತಾರೋ ಹ್ಯಾಂಗ ಕಲಿತಾರೋ ?

**ತಿಪ್ಪಣ್ಣ** – ನಾ ನೋಡಪಾ, ಮಕಮೀಸಿ ಒಡೀಲಿಕ್ಕೆ ಸುರುವಾದಾಗ ಸಾಲೀಗಿ ಹೋದೆ! ಗಡ್ಡ ಬಂದು ಬಾಯಾಗ ಬೀಳಲಿಕ್ಕೆ ಹತ್ತಿದಾಗ ಮೂರನೇ ಯತ್ತೆಗೆ ಬಂದೆ ಅಷ್ಟರಲ್ಲಿ ಹೆಂಡತಿ ಮೈನೆರೆದಳೆಂದು ಸುದ್ದಿ ಬಂತು! ಸಾಲೀಗಿ ಹೊರಟಾಗ ಮೈಮ್ಯಾಲೆ ಬಣ್ಣಾ ಸುರುವಿ ಜನರು ರುಮಾಲ ಕಸುಕೊಂಡರು—ನಾನು ನಾಚಿ ಸಾಲೀ ಬಿಟ್ಟೆ!

**ಗುಂಡ** – ಅಗಾ! ಧರಿಯಾ ಬಂದನೋಡ ಅಲ್ಲಿ ಅವ ಮಾತ್ರ ಸಾಲೀ ಮುಗಿಸಿ ಮಾಸ್ತರಾಗ್ಯಾನ ಈಗ

**ತಿಪ್ಪಣ್ಣ** – ಈಗೇನು ಹೊಲೆ ಹದಿನೆಂಟು ಜಾತಿಯವರೆಲ್ಲಾ ಮಾಸ್ತರಾಗಿ ಬಿಡತಾರ ಏನಪಾ ಧರೆಣ್ಣಾ, ಈಗ ಯಾವೂರಾಗ ಇರೋದು ?

**ಧರಿಯಪ್ಪ** – ನನಗಂದಿರಾ? ನಾನು ಇಲ್ಲೇ ಕಾತರಾಳದಾಗ ಇರತೀನಿ

**ಗುಂಡ** – ಪಗಾರೇನು ಸಿಗತದಪ್ಪ ನಿನಗ?

**ಧರಿಯಪ್ಪ** – ತುಟ್ಟಿ ಭತ್ತೆಗಿತ್ತೆ ಸೇರಿ ಎಪ್ಪತ್ತು ಸಿಗತಾದ

**ತಿಪ್ಪಣ್ಣ** – ಅಬ್ಬಬ್ಬ! ಜಗ್ಗಿ ಬರತಾದ ಬಿಡು ಕೈತುಂಬ! ನಾವು ಕಲಿಯುವಾಗ ನಿನ್ನ ತಿಂಗಳ ಪಗಾರ ವರ್ಷ ದುಡಿದಾಗ ಸಿಗುತ್ತಿತ್ತು ಮಾಸ್ತರರಿಗೆ

ಧರಿಯಪ್ಪ ;— ಅಷ್ಟಾದರೂ ನಮಗೆ ಸಾಲುವದಿಲ್ಲ!

ಗುಂಡ – ಹ್ಯಾಂಗ ಸಾಲತಾದ? ನೂರು ಕೊಟ್ಟರೂ ನೀವು ಹೀಂಗೆ ಅನ್ನುವವರೇ

ತಿಪ್ಪಣ ,— ಸಾಲ್ಯಾಗರೆ ನೀವು ಏನು ಕಲಿಸುತ್ತೀರೆಪ್ಪಾ! ಅಂಕಿ ಮುಗ್ಗಿ ಅಷ್ಟಕಷ್ಟೇ! ಕಾಲು, ಅರ್ಧಾ, ಮುಕ್ಕಾಲು, ಒಂದೂಕಾಲು, ಒಂದೂವರಿ—ಆಯಿತೇ ಎರಡೂವರಿ, ಮೂರೂವರೀ ಏನೂ ಕಲಿಸುವಾಂಗ ಇಲ್ಲ!!

ಗುಂಡ – ಆ ಮಗ್ಗಿ ಅವನಿಗೇ ಬರಲಿಕ್ಕಿಲ್ಲ, ಬಿಡು

ತಿಪ್ಪಣ್ಣ – ನಮ್ಮ ಗಂಗ್ಯಾಗ ನಿನ್ನೆ ಒಂದು ಸಣ್ಣ ಲೆಕ್ಕ ಹೇಳಿದ್ದೆ ಬರಲೇ ಇಲ್ಲ ಮತ್ತೆ ನಾಲ್ಕನೇ ಯತ್ತೆ ಕಲೀತಾನಂತ!

ಗುಂಡ – ಪೌರನೀತಿಯಂತೆ! ಸಾಮಾನ್ಯ ವಿಜ್ಞಾನವಂತೆ!!

ತಿಪ್ಪಣ್ಣ – ಅರಬೀ ಜನರ ಜೀವನವಂತೆ! ಕಾಗದೀ ಜನರ ಜೀವನವಂತೆ!! ಆದರ, ಭೀಮಾನದೀ ದಂಡಿಯ ಮ್ಯಾಲಿನ ಊರುಗಳನ್ನು ಕೇಳಿದರೆ ಒಂದೂ ಬರುವದಿಲ್ಲ!!!

ಧರಿಯಪ್ಪ – ಈಗ ಅಭ್ಯಾಸ ಕ್ರಮಗಳೆಲ್ಲ ಹೊಸವು ಬಂದಿವೆ ಹಳೆಯ ಪದ್ಧತಿಗಳೆಲ್ಲ ಈಗ ಹಳ್ಳಕೂಡಿ ಹೋದವು

ಗುಂಡ – ನಾವು ಬರೆಯುವ ಶಬ್ಧ ಈಗಿನ ಮೂರನೇ ಯತ್ತೆಯವರಿಗೂ ಬರೀಲಿಕ್ಕೆ ಆಗುವದಿಲ್ಲ ನಾರಾವಿಣ, ವೇಗ್ಯ, ಸೌಂಸಕುರತ ಇಂಥಾ ಶಬ್ಧ ಬರೀರಿ ನೋಡೋಣ?

ತಿಪ್ಪಣ್ಣ – ನಮ್ಮ ಸಾಲೀ ಸಾಹೇಬರು ಬಂದಾಗ ಸುದ್ಧ ಬರಾ ಹೇಳುತ್ತಿದ್ದರು 'ಊರ ಮುಂದಿನ ಹಳ್ಳವು ಧಡಾ ಧಡಾ ಹರಿಯುತ್ತಿತ್ತು ಅಲ್ಲಿ ಕಪ್ಪೆಗಳು ಗುಡ್ರ ಗುಘ್ ಗುಡ್ರ ಗುಘ್ ಎಂದು ಸಪ್ಪಳ ಮಾಡುತ್ತಿದ್ದವು" ಎಂದು ಹೇಳಿದರೆ ಒಬ್ಬೊಬ್ಬರು ಹತ್ತು ಹನ್ನೆರಡು ತಪ್ಪುತಿದ್ದವು

ಗುಂಡ – ಈಗ ವಿದ್ಯಾನೇ ಅಗ್ಗವಾಗಿ ಬಿಟ್ಟಿತು ಊರ ಹುಡುಗರೆಲ್ಲ ಸಾಲ್ಯಾಗ ಗುಡಿಮುಸೂತಿಗಳಲ್ಲ ಸಾಲಿ ಹದಿನೆಂಟು ಜಾತಿಯವರೆಲ್ಲ ಮಾಸ್ತರರು!

ತಿಪ್ಪಣ್ಣ - ಎಲ್ಲಾ ಹೊಲಸು ಹೊಲಗೇರಿ "ಲೋಕವೆಲ್ಲ ಏಕವಾಗಿ ಹೋಗೂದು ಬಂತೋ—ಕಲಿಕಾಲ ಬಂತೋ"

ಧರಿಯಪ್ಪ – ನೀವು ಈಗಿನ ಅಭ್ಯಾಸದ ಮಹತ್ವವನ್ನು ಅರಿತಿಲ್ಲ ಅದನ್ನು ಬಲ್ಲವರ ಬಾಯಿಂದ ಕೇಳಿಕೊಂಡರೆ, ಅದರ ಮಹತ್ವ ಕಂಡು ಬರುವದು

ಗುಂಡ – ಅದೆಲ್ಲ ಸುಳ್ಳು

ಬುದ್ಧಿಯಿಲ್ಲ, ವಿದ್ಯೆಯಿಲ್ಲ, ಶಕ್ತಿಯಿಲ್ಲವು
ಜಗದೀಶ ನೀನೇ ಕಾಯಬೇಕು ಬಾಲರಾ ||

ಅನ್ನುವದು ಈಗ ಮಾತ್ರ ಬರೋಬರಿ ಹೊಂದತಾದ

ತಿಪ್ಪಣ್ಣ – ಅವಾಗ ಹೊಡೀಲಿಕ್ಕೆ ಸಿಂತರೆ ಮಾಸ್ತರರು ಎರಡೆರಡು ಬೆತ್ತ ಮುರೀತಿದ್ದರು! ಹುಡುಗ ಅಷ್ಟು ಬಲಿತವನಿದ್ದರೂ ಮೂರು ದಿನಾ ಕಾಸಿಕೊಳ್ಳಬೇಕಾಗುತ್ತಿತ್ತು

ಧರಿಯಪ್ಪ – ಅಷ್ಟು ಏಟು ತಿಂದವರು ಎಷ್ಟು ಕಲಿಯುತ್ತಿದ್ದರು?

ಗುಂಡ – ಎಷ್ಟೋ ಕಲೀವಲ್ಲರೇಕ! ನಾನು ಮೂರನೇಯತ್ತ ಮುಗಿಸಿಲ್ಲಪ್ಪಾ ಆದರೂ–ನನ್ನಷ್ಟಾದರೂ ಇವರು ಗಳಿಸುವರೆ? ನಾನು ಈ ನಾಲ್ಕು ವರ್ಷದಾಗ ಹತ್ತು ಸಾವಿರ ಗಳಿಸಿದ್ದೇನೆ ಎರಡು ಹೊಲಾ ಆದವು ಒಂದು ಮನೀ ಆಯ್ತು ಅಂಗಡಿ ಒಂದಾಯ್ತು! ನೀವು ಮೂರಿಪ್ಪತ್ತು, ನಾಲ್ಕಿಪ್ಪತ್ತು ಪಗಾರ ತಗೊಂಡು ಏನು ಗಳಿಸಿದ್ದೀರಿ? ಹೇಳಿರೆಲ್ಲಾ!

ತಿಪ್ಪಣ್ಣ – ನಮ್ಮ ನಾಟೀಕಾರ ಗುರವ್ವನ ಮಗ ಬರೇ ಹಮಾಲೀ ಕೆಲಸಾನೆ ಮಾಡತಾನೆ ದಿನಾಲೂ ನಾಲ್ಕು ರೂಪಾಯಿ ಇಲ್ಲದೆ ಮನೀಗೇ ಬರೂದಿಲ್ಲ!

ಗುಂಡ – ಅದ್ಯಾಕಪಾ! ನಮಗಾರ ಚಂದ್ಯಾ ಒಂದು ಕೈ ಸಹ ಇಲ್ಲ ಸಂತೀ ದಿನಾ ದನದ ಬಾಜಾರದಾಗ ಹೋಗಿ ಮಂದೀನ ಬೆದರಿಸಿ ಹತ್ತು ರೂಪಾಯಿ ತರತಾನ

ಧರಿಯಪ್ಪ – ನೀವು ಹೇಳುವ ಗಳಿಕೆ ಸರಿಯಾದ ದಾರಿಯದಲ್ಲ!

ತಿಪ್ಪಣ್ಣ – ನಿಮ್ಮ ದಾರಿ ಮಾತ್ರ ಸರಿಯೇ? ಆಡೂ ಮಕ್ಕಳಿಗೆ ಅಡವೀ ಕೂಡಿಸಿಧಾಂಗ–ಊರಾಗ ತಿರುಗಾಡುವ ಹುಡುಗರನ್ನು ಸಾಲೀಗಿ ತರಿಸಿ ನೂಲು ತಗೀಲಿಕ್ಕೆ ಹಚ್ಚತೀರಿ, ಗುಡಾರಪಟ್ಟಿ ನೆಯ್ಯಲಿಕ್ಕೆ ಹಚ್ಚತೀರಿ!

ಹಲ್ಲು ತಿಕ್ಕುವದು, ಅಂಗೀಗೆ ಸಬಕಾರ ಹಚ್ಚುವದು, ಇಂಥಾ ಚೈನೀ ಕಲಿಸಿ ಹುಡುಗರನ್ನೆಲ್ಲ ಬರಬಾದ ಮಾಡಿ ಬಿಡತೀರಿ

ಗುಂಡ – ನಾಳೆ ಅವರಿಗ ದನಾಕಾಯಲಿಕ್ಕೆ ಬರುವದಿಲ್ಲ ಸರಿಯಾಗಿ

ತಿಪ್ಪಣ್ಣ – ಮತ್ತೆ ಅಡವೀ ಕೆಲಸಂದರೆ ಮೋರೆಗೆ ಸೆರಗು ಹಾಕುತ್ತಾರೆ!

ಧರಿಯಪ್ಪ – ಇಲ್ಲಿ ಕೇಳಿರಿ ಸಾಲೀ ಕಲಿತರೆ ಓದಲಿಕ್ಕೆ, ಬರೀಲಿಕ್ಕೆ ಬರುತ್ತದೆ ದೊಡ್ಡವರಾಗಿ ವರ್ತಮಾನಪತ್ರ ಓದಿ ದೇಶದೊಳಗಿನ ಸುದ್ದಿ ತಿಳಕೊಳ್ಳಲಿಕ್ಕೆ ಬರುತ್ತದೆ ತಮ್ಮ ಉದ್ಯೋಗದ ಲೆಕ್ಕಪತ್ರ ಇಡುವರು ಇವು ಸಣ್ಣ ಮಾತೇನು?

ಗುಂಡ – ಉದ್ಯೋಗವೇ ಬಾರದವರಿಗೆ ಲೆಕ್ಕಪತ್ರವೇಕಂತೆ?

ಧರಿಯಪ್ಪ – ಉದ್ಯೋಗದ ಪ್ರೀತಿ ಹುಟ್ಟಲೆಂದೇ ಸಾಲೆಯಲ್ಲಿ ನೂಲುವದಕ್ಕೆ ಕಲಿಸುತ್ತಾರೆ ನೆಯ್ಯಲಿಕ್ಕೆ ಕಲಿಸುತ್ತಾರೆ ರಟ್ಟು ಕತ್ತರಿಸುವದು, ಕಾಯಿಪಲ್ಯೆ ಬೆಳೆಸುವದು—ಇವನ್ನು ಕಲಿಸುತ್ತಾರೆ

ತಿಪ್ಪಣ್ಣ – ಅಂಥವನ್ನಲ್ಲ ಕಲಿಸಲಿಕ್ಕೆ ಸಾಲೆಯೇಕೆ ಬೇಕು? ಮನೆಯಲ್ಲಿ ಆಡಾಡುತ್ತ ಕಲಿಯುತ್ತಾರೆ?

ಗುಂಡ – ಹೆಂಗಸರು ಅಡಿಗೆ ಮಾಡಲಿಕ್ಕೆ ಯಾವ ಶಾಲೆಯಲ್ಲಿ ಕಲಿತು ಬರುವರು? ಹೇಳು ನೋಡೋಣ

ಧರಿಯಪ್ಪ – ಹಾಂಗಾದರೆ ಸಾಲ್ಯಾಗ ಕಲಿಸೂದು ಯಾವ ಉಪಯೋಗಕ್ಕೂ ಬರುವದಿಲ್ಲವೇ?

ತಿಪ್ಪಣ್ಣ – ಮೂಕ ಅರ್ಜಿ ಬರೀಲಿಕ್ಕೆ, ಇಲ್ಲದ ಹಕಳೀ ಎತ್ತಲಿಕ್ಕೆ ಮಾತ್ರ ದಾರಿಯಾಗುತ್ತದೆ

**ಸಾಲೀಗ್ಹಾಕಿ ಮಗನ ಶ್ಯಾಣ್ಯಾರ ಮಾಡತೀರಿ। ಹೆಂಡಿ ತಿನ್ನೂದ ಅವಗು ಬಿಟ್ಟಿಲ್ಲ ॥ ಸಾಲೀಕಲ್ತವರೆಲ್ಲ ಶ್ಯಾಣ್ಯಾರ್ಯಾಕ ಆಗಿಲ್ಲ। ತಿನ್ನಾಕ ಮನಿಯಾಗ ಕೂಳಿಲ್ಲ ॥ ಕಾಲಾಗ ಬೂಟ ಮೆಟ್ಟಿ। ಕಮಾನ ಝುಟ್ಟಬಿಟ್ಟಿ। ಕೋಟ ತೊಟ್ಟು ಮಾಡತಾರ ಒಣಡೌಲಾ॥**

ಗುಂಡ – ಇಲ್ಲಿ ಕೇಳು—

**ಊರತುಂಬ ಸಣ್ಣದೊಡ್ಡ ಸರ್ವರಿಗೆಲ್ಲಾ ಹೇಳತೀನಿ ನನ್ನ ಕಡಿ ನಿನ್ನವೊದಲ ಮಾಡಿಕೊಂಡುಕೇರಾ।**

ಬಾರಾ ತೇರಾ ವರ್ಷದಾಗ ಆಗಬೇಕಂತಾರ ದೊಡ್ಡ ಹಿರಿಯರಾ !
ಕೂಲಿಗ್ಹೋಗೋದು ಬಿಟ್ಟು ಕಟ್ಟೇಗಿ ಕೂತು ಮಾಡಬೇಕಂತಾರ ಕಾರಭಾ:

ತಿಪ್ಪಣ್ಣ – ಕೇಳಿವೆಪ್ಪ, ಸಾಲೀಕಲ್ತವರ ಹಾಡು !

ಧರಿಯಪ್ಪ – ಹೌದಪ್ಪಾ ! ಈಗ ನೀವೇ ನೋಡಿರಿ ಇಷ್ಟು ತುಸು ಕಲಿತರೂ ಎಂಥಾ ದೊಡ್ಡ ದೊಡ್ಡ ಬೋಧೆ ಹೇಳುತ್ತೀರಿ ನಿಜವಾಗಿ ನೀವು ಪೂರಾ ಸಾಲೀ ಕಲಿತಿದ್ದರೆ, ಸರಕಾರದಲ್ಲಿ ಮಂತ್ರಿ ಆಗುತ್ತಿದ್ದಿರಿ !

ಗುಂಡ – ಅದು ಸುಳ್ಳೇನು ಧರಿಯಣ್ಣಾ !

ತಿಪ್ಪಣ್ಣ – ಅದು ತೀರಾ ಖರೇ ಅದ ಹೀಂಗ ಹಾದೀಗಿ ಬಾರೋ ಧರಿಯಪ್ಪಾ

ಧರಿಯಪ್ಪ – ಸಾಲೀ ವಿದ್ಯಾ ತಿದ್ದಿಕೊಳ್ಳಲಿಕ್ಕೆ ನಿಮ್ಮಂಥವರು ಸರಕಾರದಾಗ ಇರತಕ್ಕದ್ದು ಅಂಥಲ್ಲಿ ಹೋಗಿ, ಸಾಲ್ಯಾಗಿನ ವಿದ್ಯಾ ತಿದ್ದಿರೆಂದು ಹೇಳಲಿಕ್ಕೂ ಸಾಲೀ ಕಲೀಬೇಕಾಗುತ್ತದ

ಗುಂಡ – ಹೌದು, ಹಾಂಗನ್ನು !

ಧರಿಯಪ್ಪ – ತಪ್ಪು ತೋರಿಸಿ ಕೊಡದಿದ್ದರೆ ತಿದ್ದಿಕೊಳ್ಳುವದು, ಹ್ಯಾಂಗ ?

ತಿಪ್ಪಣ್ಣ – ಸರಕಾರಕ್ಕ ಸರಿ ಅನಿಸುವಾಂಗ ಹೇಳಬೇಕಾದರೂ ನಾವು ಇದ್ದಷ್ಟರಾಗ ಕಲಿತು ಶ್ಯಾಣ್ಯಾರಾಗಬೇಕು ಈ ಮಾತು ಖರೇ ಅದ

ಧರಿಯಪ್ಪ – ಈಗ ನೋಡಪ್ಪಾ, ನಮ್ಮೂರ ಸಾಲ್ಯಾಗ ರೇಡಿಯೋ ತಂದಾರ ಅದನ್ನ ಕೇಳಲಿಕ್ಕೆ ದಿನಾಲು ಎಷ್ಟು ಜನರು ನೆರೀತಾರ ಅದು ಸಾಲೀ ಕಲತಾಂಗ ಅಲ್ಲೇನು ?

ಗುಂಡ – ಹೌದಂತೀನಲ್ಲ ಹಾಂಗ ನಮಗೆ ಬೇಕಾದ ಮಾತು ಸಿಗತಿದ್ದರ, ನಾವೇ ಓಡೋಡಿ ಬರತೇನಲ್ಲ

ಧರಿಯಪ್ಪ – ರೇಡಿಯೋದಲ್ಲಿ ದಿನಾಲು ಕೇಳತೀರಿ ಗೊಬ್ಬರ ಹ್ಯಾಂಗ ತಯಾರಿಸಬೇಕು ? ಆಗಿ ಮಾಡಲಿಕ್ಕೆ ಹಂಗಾಮು ಯಾವುದು ? ಸಹಕಾರೀ ಸಂಘದ ಉದ್ದೇಶವೇನು ? ಊರುಕೇರಿ ಹ್ಯಾಂಗ ಜಳಜಳ ಇಟ್ಟುಕೋಬೇಕು ? ಬೇನೆ ಬರದಂತೆ ಏನು ಉಪಾಯಮಾಡಬೇಕು ? ಬೇನೆ ಬಂದಾಗ

ಹೊಡುವ ಎಚ್ಚರಿಕೆ ತೆಗೆದುಕೊಳ್ಳಬೇಕು ? ಯಾವ ದಿನದಾಗ ಯಾವ ಉದ್ಯೋಗ ಆರಿಸಿಕೊಳ್ಳಬೇಕು ? ಈ ಎಲ್ಲ ಸಂಗತಿ ಯಾರಿಗೆ ಬೇಡಾಗಿರುತ್ತವೆ ? ಹೇಳಿರಿ

ತಿಪ್ಪಣ್ಣ – ಎಲ್ಲರಿಗೂ ಬೇಕು

ಧರಿಯಪ್ಪ – ಅದೇ ಮಾಹಿತಿ ಚಿಕ್ಕವರಿರುವಾಗ ಸಾಲೆಯಲ್ಲಿ ಕಲಿಸಿ ಅದರ ರೂಢಿನೇ ಮಾಡಿಸಿಬಿಟ್ಟರೆ ಅದು ನಾಳೆ ಸಂಸಾರದಾಗ ಉಪಯೋಗ ಆಗೂದಿಲ್ಲೇನಪ್ಪ !

ಗುಂಡ – ಹೌದು ಅದು ಖರೇ ಅದೆ ಗಿಡವಿದ್ದಾಗೇ ಬಾಗುತ್ತದೆ ಮರವಾದಾಗ ಬಾಗೂದಿಲ್ಲ

ತಿಪ್ಪಣ್ಣ – ಸಾಲೀ ಕಲ್ತು ಕಲ್ತು ನೌಕರೀ ಸಿಗದಿದ್ದರೆ ಅದರ ಫಲ ವೇನಪ್ಪಾ ಧರಿಯಪ್ಪಾ ?

ಧರಿಯಪ್ಪ – ಹಿಂದಿನ ವಿದ್ಯಾ ಕಲ್ತವರು ನೌಕರೀ ಬೇಡಿಕೊಳ್ಳುವ ಕಂಗಾಲಾಗುತ್ತಿದ್ದರು ಈಗ ಸಾಲ್ಯಾಗ ಧಂದೇದ ವಿದ್ಯಾ ಕಲ್ತು ನೌಕರಿ ಕೊಡುವ ಧನಿಯರಾಗಬೇಕಾಗಿದೆ ನೌಕರಿ ಬೇಡಿ ಕಂಗಾಲ ಆಗವರು ಬೇಕೋ, ನೌಕರಿ ಕೊಡುವ ಧನಿಕರು ಬೇಕೋ ? ಯಾವುದು ಒಳ್ಳೇಯದು ?

ಗುಂಡ – ಒಬ್ಬರ ಆಳಾಗಿ ದುಡಿಯುವದಕ್ಕಿಂತ ಆಳಿನ ದುಡಿಸಿ ಕೊಳ್ಳುವ ಧನಿಯಾಗುವದು ಹೆಚ್ಚಿನದು !

ಧರಿಯಪ್ಪ – ಈಗ ಸಾಲೆಯಲ್ಲಿ ಸುರುವಾದದ್ದು ಅಂಥ ವಿದ್ಯೆ ಇನ್ನು ಕೆಲವೇ ವರ್ಷಗಳಲ್ಲಿ ಎಲ್ಲರ ಕೈಗೂ ಉದ್ಯೋಗ ಬರುವಂತೆ, ಎಲ್ಲರ ತಲೆಗೂ ಬುದ್ಧಿ ಬರುವಂತೆ ಮಾಡಿ, ಸುಖದ ಕಾಲ ತರಬೇಕೆಂದು ಸರಕಾರ ನಿದ್ದೆ–ನೀರಡಿಕೆಯಿಲ್ಲದ ದುಡಿಯಲಿಕ್ಕೆ ಹತ್ತಿರುವಾಗ, ನಾವು ಇಂಥ ಹಳ್ಳಿ ಯಲ್ಲಿ ಕುಳಿತು ಬರೇ ಕುಂದು ಎಣಿಸಿ ಹೆಸರಿಡುತ್ತ ಹೋಗಬಾರದು

ತಿಪ್ಪಣ್ಣ – ಇಗಾ ಕೇಳು ಧರಿಯಪ್ಪಾ ! ನಾವು ಇಷ್ಟು ಹಿಸುಕಿ ಮಾತಾಡಿದ್ದರಿಂದಲೇ ನೀನು ಈಗಿನ ಸಾಲೀ ವಿದ್ಯಾದ ಮರ್ಮ ಹೇಳಿದಿ ಇಲ್ಲದಿದ್ದರ ನಮಗೇನು ತಿಳೀತಿತ್ತು ? ನಾವೆಲ್ಲ ಅಜ್ಜ ನೆಟ್ಟ ಗಿಡಾನೇ ಒಳ್ಳೆಯದು ಅಂಬುವವರೇ !

ಧರಿಯಪ್ಪ – ಅದಕ್ಕೆಂತಲೇ ಹಳ್ಳಿಹಳ್ಳಿಗೆ ಸರಕಾರ ಸಾಲೀ ಮಾಡಿದೆ ಚಿಕ್ಕವರಿರುವಾಗಲೇ ಓದು ಬರಹ ಕಲಿಯಲೆಂದು ಒತ್ತಾಯ ಮಾಡಿದೆ ದೊಡ್ಡವರು ದಡ್ಡರಾಗಿಯೇ ಉಳಿಯಬಾರದೆಂದು ರಾತ್ರಿ ಶಾಲೆಯ ಹಾದಿ ಹುಡುಕಿದೆ ರೇಡಿಯೋ, ಮಾಯಾದೀಪ ಮೊದಲಾದವುಗಳ ಸಹಾಯದಿಂದ ಜ್ಞಾನಪ್ರಸಾರ ಮಾಡಲಿಕ್ಕೆ ಸರಕಾರವು ಬಹಳ ಹಣ ಖರ್ಚು ಮಾಡುತ್ತದೆ! ಅವರೇನು ದಡ್ಡರೇ?

ಗುಂಡ – ಛೀ, ಛೀ, ದಡ್ಡರೇಕೆ ಆದಾರು?

ಧರಿಯಪ್ಪ – ಅವರು ನಮ್ಮನ್ನು ಮೋಸಮಾಡಬೇಕೆನ್ನುತ್ತಾರೆಯೇ?

ತಿಪ್ಪಣ್ಣ – ಒಬ್ಬರೇ, ಇಬ್ಬರೇ? ಅಷ್ಟು ಜನರು ಮಳ್ಳ ಕುರಿಗಳೇ ಆಗಿದ್ದಾರೆಯೇ?

ಧರಿಯಪ್ಪ – ಹೌದಲ್ಲೋ! ಇನ್ನಾದರೂ ಸಾಲ್ಯಾಗಿನ ವಿದ್ಯಾ ಉಪಯೋಗಿಲ್ಲಾ ಅನ್ನುವದನ್ನು ತಲೆಯೊಳಗಿಂದ ತೆಗೆದುಹಾಕಿರಿ

ಗುಂಡ – ತೆಗೆದ ಬಳಿಕ ಹಾಕುವದೇಕೆ ಮತ್ತೆ? ತೆಗೆದೇ ಒಗೆಯುತ್ತೇವೆ ಆಯಿತೇ?

ತಿಪ್ಪಣ್ಣ – ನಮ್ಮ ತಿಪ್ಪೆಯೆಲ್ಲಾ ಈ ಹೊತ್ತು ಗೊಬ್ಬರಾಗಿ ಹೋಯಿತು!

ಗುಂಡ - ನಮ್ಮ ಗುಂಡಿನ ಕೆರಕು ನುಣ್ಣಗಾಗಿ ಬಿಟ್ಟಿತು!

ಧರಿಯಪ್ಪ – ಹೌದಲ್ಲವೇ? ಹಾಗಾದರೆ ಜಯ-ಹಿಂದ ಅನ್ನೋಣ

ಎಲ್ಲರೂ – ಜಯ ಹಿಂದ! ಜಯ-ಹಿಂದ!!

---

## ಮಾರಾಟಕ್ಕೆ ಸಿದ್ಧವಿರುವ
## ಸಿಂಪಿ ಲಿಂಗಣ್ಣನವರ ಕೃತಿಗಳು

| | | |
|---|---|---|
| ೧ | ಶ್ರೀಅರವಿಂದರು | ೧ ೧೨-೦ |
| ೨ | ಶ್ರೀಅರವಿಂದರ ಪತ್ರಗಳು | ೦-೮-೦ |
| ೩. | ಧರ್ಮ ಹಾಗೂ ರಾಷ್ಟ್ರೀಯತ್ವ (ಶ್ರೀಅರವಿಂದರು) | ೧-೮-೦ |
| ೪ | ಉತ್ತರಪಾರಾ ಉಪನ್ಯಾಸ ,, | ೦-೬-೦ |
| ೫ | ಧರ್ಮಕ್ಷೇತ್ರೇ ಕುರುಕ್ಷೇತ್ರೇ ,, | ೦-೮-೦ |
| ೬. | ಯೋಗದೀಕ್ಷೆ (ಶ್ರೀಅರವಿಂದರೊಡನೆ ಪತ್ರವ್ಯವಹಾರ) | ೧-೦-೦ |
| ೭. | ಪೂರ್ಣಯೋಗ (ಶ್ರೀ ನಲಿನೀಕಾಂತ ಗುಪ್ತ) | ೧-೦-೦ |
| ೮ | ಸುಂದರ ಕಥೆಗಳು (ಶ್ರೀ ತಾಯಿಯವರು) | ೧-೦-೦ |
| ೯. | ಮುಗಿಲ ಜೇನು (ಕವನ ಸಂಗ್ರಹ) | ೧-೮-೦ |
| ೧೦ | ಪೂಜಾ (ಗದ್ಯ ಗೀತಗಳು) | ೦-೧೨-೦ |
| ೧೧. | ಭಾರತದ ಭವ್ಯ ಸಿದ್ಧತೆ (ಇತಿಹಾಸ ನಿರೀಕ್ಷಣ) | ೧-೦ ೦ |
| ೧೨ | ಭಾರತಕ್ಕೆ ಸ್ವರಾಜ್ಯ ದೊರೆತುದೇಕೆ? | ೦-೪ ೦ |
| ೧೩ | ಸ್ವರ್ಗದೋಲೆಗಳು | ೧-೮-೦ |
| ೧೪ | ಪತ್ರಸಾಹಿತ್ಯ | ೧-೮-೦ |
| ೧೫ | ಪವಿತ್ರ ಜೀವನ (ಟಾಲಸ್ಟಾಯರ ಕಥೆಗಳು) | ೧-೮-೦ |
| ೧೬. | ಬೆಟ್ಟದ ಹೊಳೆ (ಕಾದಂಬರಿ) | ೧-೪-೦ |
| ೧೭. | ಹಳ್ಳಿಯ ಮಹಾತ್ಮ (ಆದರ್ಶ ಶಿಕ್ಷಕರ ಜೀವನ) | ೦ ೧೨-೦ |
| ೧೮. | ಜೀವನ ದೃಷ್ಟಿ (ಪ್ರಬಂಧ ಸಂಗ್ರಹ) | ೧-೨-೦ |
| ೧೯. | ಗರತಿಯ ಬಾಳು | ೧ ೦-೦ |
| ೨೦ | ಭಕ್ತರಾಜ ಬಸವಣ್ಣ | ೦-೧೨-೦ |
| ೨೧ | ಸಪ್ತಪದಿ (ಏಕಾಂಕ ನಾಟಕಗಳು) | ೧ ೪-೦ |

ಶ್ರೀಅರವಿಂದ ಗ್ರಂಥಾಲಯ

ಪೋ ಚಡಚಣ

ಜಿ ವಿಜಾಪುರ



## ಶ್ರೀ. ಸಿಂಪಿ ಲಿಂಗಣ್ಣನವರು, ಚಡಚಣ

ಶ್ರೀಯುತರದು ತುಂಬು ಜೀವನ ತುಂಬಿದ ಮುಖ, ಯಾವಾಗಲೂ ಹಸನ್ಮುಖಿ

ಕಾಲುಶತಮಾನಕ್ಕೂ ಪೂರ್ವದಿಂದ ಕನ್ನಡದಲ್ಲಿ ಲೇಖನ ಕಾರ್ಯ ನಡೆಸಿಕೊಂಡು ಬಂದ ಇವರು ಇಂದೀಗ ಇಪ್ಪತ್ತೈದಕ್ಕೂ ಮಿಕ್ಕಿದ ಸಂಖ್ಯೆಯಲ್ಲಿ ಪುಸ್ತಕಗಳನ್ನು ನೀಡಿದ್ದಾರೆ ಕಥೆ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ ಮುಂತಾದ ಸಾಹಿತ್ಯದ ವಿವಿಧಾಂಗಗಳ ನಿರ್ಮಿತಿಗ ಇವರ ಕೈ ಕುಸುರಾಗಿ ಆಡಿದೆ ಹೀಗೆ ಸ್ವತಂತ್ರ ಕೃತಿರಚನೆಯ ಜತೆಗೆ ಶ್ರೀ ಅರವಿಂದಯೋಗಿಗಳ ಅನೇಕ ಗ್ರಂಥಗಳನ್ನು ಕನ್ನಡಿಸಿ ಪ್ರಕಟಿಸಿದ್ದಾರೆ.

ಶ್ರೀ ರಾಮಕೃಷ್ಣ, ಶ್ರೀ ಸ್ವಾಮಿ ವಿವೇಕಾನಂದರ ಜೀವನ ಧ್ಯೇಯಂಗಳ ನಿಧಿಧ್ಯಾಸದಿಂದ ಮೊದಲಾದ ಇವರ ತತ್ವಚಿಂತನೆ ಶ್ರೀ ಅರವಿಂದರ ಯೋಗದಲ್ಲಿ ಆಳದ ಅನುಭವವನ್ನೂ ವಿಚಾರದ ಹರವನ್ನೂ ಕಂಡುಕೊಂಡಿದೆ

ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದು, ಅಲ್ಲಿಯೇ ನೆಲಸಿ ಆ ಜೀವನದ ಸುಖ-ದುಃಖಗಳಲ್ಲಿ ಪಾಲುಗೊಂಡ ಇವರು ಆ ಜನದ ರಸಿಕತೆಯನ್ನು ಜನಪದ ಸಾಹಿತ್ಯದಲ್ಲಿ ಕಂಡು ಹಳ್ಳಿಗರ ಹಾಡುಗಳ ಸಂಗ್ರಹ ಕಾರ್ಯವನ್ನು, ಸಂಪಾದನ ಕಾರ್ಯವನ್ನು ಅಚ್ಚು ಕಟ್ಟಾಗಿ ಮಾಡಿ ಶ್ರೇಯೋಭಾಗಿಗಳಾಗಿದ್ದಾರೆ

**ಧರಿಯಪ್ಪ :—** ಅದಕ್ಕೆಂತಲೇ ಹಳ್ಳಿಹಳ್ಳಿಗೆ ಸರಕಾರ ಸಾಲೀ ಮಾಡಿದೆ. ಚಿಕ್ಕವರಿರುವಾಗಲೇ ಓದು ಬರಹ ಕಲಿಯಲೆಂದು ಒತ್ತಾಯ ಮಾಡಿದೆ. ದೊಡ್ಡವರು ದಡ್ಡರಾಗಿಯೇ ಉಳಿಯಬಾರದೆಂದು ರಾತ್ರಿ ಶಾಲೆಯ ಹಾದಿ ಹುಡುಕಿದೆ. ರೇಡಿಯೋ, ಮಾಯಾದೀಪ ಮೊದಲಾದವುಗಳ ಸಹಾಯದಿಂದ ಜ್ಞಾನಪ್ರಸಾರ ಮಾಡಲಿಕ್ಕೆ ಸರಕಾರವು ಬಹಳ ಹಣ ಖರ್ಚು ಮಾಡು ತ್ತದೆ! ಅವರೇನು ದಡ್ಡರೇ ?

**ಗುಂಡ :—** ಛೇ, ಛೇ, ದಡ್ಡರೇಕೆ ಆದಾರು ?

**ಧರಿಯಪ್ಪ :—** ಅವರು ನಮ್ಮನ್ನು ಮೋಸಮಾಡಬೇಕೆನ್ನುತ್ತಾರೆಯೇ?

**ತಿಪ್ಪಣ್ಣ :—** ಒಬ್ಬರೇ, ಇಬ್ಬರೇ ? ಅಷ್ಟು ಜನರು ಮಳ್ಳ ಕುರಿಗಳೇ ಆಗಿದ್ದಾರೆಯೇ ?

**ಧರಿಯಪ್ಪ :—** ಹೌದಲ್ಲೋ ! ಇನ್ನಾದರೂ ಸಾಲ್ಯಾಗಿನ ವಿದ್ಯಾ ಉಪಯೋಗಿಲ್ಲಾ ಅನ್ನುವದನ್ನು ತಲೆಯೊಳಗಿಂದ ತೆಗೆದುಹಾಕಿರಿ.

**ಗುಂಡ :—** ತೆಗೆದ ಬಳಿಕ ಹಾಕುವದೇಕೆ ಮತ್ತೆ ? ತೆಗೆದೇ ಒಗೆಯು ತ್ತೇವೆ. ಆಯಿತೇ ?

**ತಿಪ್ಪಣ್ಣ :—** ನಮ್ಮ ತಿಪ್ಪೆಯೆಲ್ಲಾ ಈ ಹೊತ್ತು ಗೊಬ್ಬರಾಗಿ ಹೋಯಿತು !

**ಗುಂಡ :—** ನಮ್ಮ ಗುಂಡಿನ ಕೆರಕು ನುಣ್ಣಗಾಗಿ ಬಿಟ್ಟಿತು !

**ಧರಿಯಪ್ಪ :—** ಹೌದಲ್ಲವೇ ? ಹಾಗಾದರೆ **ಜಯ-ಹಿಂದ** ಅನ್ನೋಣ.

**ಎಲ್ಲರೂ :—** ಜಯ-ಹಿಂದ ! ಜಯ-ಹಿಂದ !!

---

ಮಾರಾಟಕ್ಕೆ ಸಿದ್ಧವಿರುವ

**ಸಿಂಪಿ ಲಿಂಗಣ್ಣನವರ ಕೃತಿಗಳು.**

| | | |
|---|---|---|
| ೧. | ಶ್ರೀಅರವಿಂದರು | ೧-೧೨-೦ |
| ೨. | ಶ್ರೀಅರವಿಂದರ ಪತ್ರಗಳು | ೦-೮-೦ |
| ೩. | ಧರ್ಮ ಹಾಗೂ ರಾಷ್ಟ್ರೀಯತ್ವ (ಶ್ರೀಅರವಿಂದರು) | ೧-೮-೦ |
| ೪. | ಉತ್ತರಪಾರಾ ಉಪನ್ಯಾಸ ,, | ೦-೬-೦ |
| ೫. | ಧರ್ಮಕ್ಷೇತ್ರೇ ಕುರುಕ್ಷೇತ್ರೇ ,, | ೦-೮-೦ |
| ೬. | ಯೋಗದೀಕ್ಷೆ (ಶ್ರೀಅರವಿಂದರೊಡನೆ ಪತ್ರವ್ಯವಹಾರ) | ೧-೦-೦ |
| ೭. | ಪೂರ್ಣಯೋಗ (ಶ್ರೀ ನಲಿನೀಕಾಂತ ಗುಪ್ತ) | ೧-೦-೦ |
| ೮. | ಸುಂದರ ಕಥೆಗಳು (ಶ್ರೀ ತಾಯಿಯವರು) | ೧-೦-೦ |
| ೯. | ಮುಗಿಲ ಜೇನು (ಕವನ ಸಂಗ್ರಹ) | ೧-೮-೦ |
| ೧೦. | ಪೂಜಾ (ಗದ್ಯ ಗೀತಗಳು) | ೦-೧೨-೦ |
| ೧೧. | ಭಾರತದ ಭವ್ಯ ಸಿದ್ಧತೆ (ಇತಿಹಾಸ ನಿರೀಕ್ಷಣ) | ೧-೦ ೦ |
| ೧೨. | ಭಾರತಕ್ಕೆ ಸ್ವರಾಜ್ಯ ದೊರೆತುದೇಕೆ? | ೦-೪-೦ |
| ೧೩. | ಸ್ವರ್ಗದೋಲೆಗಳು | ೧-೮-೦ |
| ೧೪. | ದತ್ತಸಾಹಿತ್ಯ | ೧-೮-೦ |
| ೧೫. | ಪವಿತ್ರ ಜೀವನ (ಟಾಲಸ್ಟಾಯರ ಕಥೆಗಳು) | ೧-೮-೦ |
| ೧೬. | ಬೆಟ್ಟದ ಹೊಳೆ (ಕಾದಂಬರಿ) | ೧-೪-೦ |
| ೧೭. | ಹಳ್ಳಿಯ ಮಹಾತ್ಮ (ಆದರ್ಶ ಶಿಕ್ಷಕರ ಜೀವನ) | ೦-೧೨-೦ |
| ೧೮. | ಜೀವನ ದೃಷ್ಟಿ (ಪ್ರಬಂಧ ಸಂಗ್ರಹ) | ೧-೨-೦ |
| ೧೯. | ಗರತಿಯ ಬಾಳು | ೧-೦-೦ |
| ೨೦. | ಭಕ್ತರಾಜ ಬಸವಣ್ಣ | ೦-೧೨-೦ |
| ೨೧. | ಸಪ್ತಪದಿ (ಏಕಾಂಕ ನಾಟಕಗಳು) | ೧-೪-೦ |

## ಶ್ರೀಅರವಿಂದ ಗ್ರಂಥಾಲಯ

ಪೋ. ಚಡಚಣ

ಜಿ. ವಿಜಾಪುರ



## ಶ್ರೀ. ಸಿಂಪಿ ಲಿಂಗಣ್ಣನವರು, ಚಡಚಣ

ಶ್ರೀಯುತರದು ತುಂಬು ಜೀವನ. ತುಂಬಿದ ಮುಖ; ಯಾವಾಗಲೂ ಹಸನ್ಮುಖ.

ಕಾಲುಶತಮಾನಕ್ಕೂ ಪೂರ್ವದಿಂದ ಕನ್ನಡದಲ್ಲಿ ಲೇಖನ ಕಾರ್ಯ ನಡೆಸಿಕೊಂಡು ಬಂದ ಇವರು ಇಂದೀಗ ಇಪ್ಪತ್ತೈದಕ್ಕೂ ಮಿಕ್ಕಿದ ಸಂಖ್ಯೆಯಲ್ಲಿ ಪುಸ್ತಕಗಳನ್ನು ನೀಡಿದ್ದಾರೆ. ಕಥೆ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ ಮುಂತಾದ ಸಾಹಿತ್ಯದ ವಿವಿಧಾಂಗಗಳ ನಿರ್ಮಿತಿಗೆ ಇವರ ಕೈ ಕುಸುರಾಗಿ ಆಡಿದೆ. ಹೀಗೆ ಸ್ವತಂತ್ರ ಕೃತಿರಚನೆಯ ಜತೆಗೆ ಶ್ರೀ ಅರವಿಂದಯೋಗಿಗಳ ಅನೇಕ ಗ್ರಂಥಗಳನ್ನು ಕನ್ನಡಿಸಿ ಪ್ರಕಟಿಸಿದ್ದಾರೆ.

ಶ್ರೀ ರಾಮಕೃಷ್ಣ, ಶ್ರೀ ಸ್ವಾಮಿ ವಿವೇಕಾನಂದರ ಜೀವನ ಧ್ಯೇಯಗಳ ನಿಧಿಧ್ಯಾಸದಿಂದ ಮೊದಲಾದ ಇವರ ತತ್ವಚಿಂತನೆ ಶ್ರೀ ಅರವಿಂದರ ಯೋಗದಲ್ಲಿ ಆಳದ ಅನುಭವವನ್ನೂ ವಿಚಾರದ ಹರವನ್ನೂ ಕಂಡುಕೊಂಡಿದೆ.

ಹಳ್ಳಿಯಲ್ಲಿಯೇ ಹುಟ್ಟಿ ಬೆಳೆದು, ಅಲ್ಲಿಯೇ ನೆಲಸಿ ಆ ಜೀವನದ ಸುಖ-ದುಃಖಗಳಲ್ಲಿ ಪಾಲುಗೊಂಡ ಇವರು ಆ ಜನದ ರಸಿಕತೆಯನ್ನು ಜನಪದ ಸಾಹಿತ್ಯದಲ್ಲಿ ಕಂಡು ಹಳ್ಳಿಗರ ಹಾಡುಗಳ ಸಂಗ್ರಹ ಕಾರ್ಯವನ್ನು, ಸಂಪಾದನ ಕಾರ್ಯವನ್ನು ಅಚ್ಚು ಕಟ್ಟಾಗಿ ಮಾಡಿ ಶ್ರೇಯೋಭಾಗಿಗಳಾಗಿದ್ದಾರೆ.